ಶ್ರೀ

# ಕರ್ನಾಟಕದ
# ವೀರರತ್ನಗಳು

---

ಲೇಖಕರು

ವೆಂಕಟೇಶ ಭೀಮರಾವ ಆಲೂರ, ಬಿ ಎ, ಎಲ್ ಎಲ್ ಬಿ,

**ಧಾರವಾಡ.**

---

ಪ್ರಕಾಶಕರು

ರಾಮರಾವ ಹುಕ್ಕೇರಿಕರ ಎಂ ಎ, ಕಾರ್ಯದರ್ಶಿ

ಕರ್ನಾಟಕ ಶಿಕ್ಷಣ ಸಮಿತಿ,

**ಧಾರವಾಡ.**

---

# —: ಅನುಕ್ರಮಣಿಕೆ :—

ಶ್ರೀ

# ಪ್ರಕಾಶಕರ ಮುನ್ನುಡಿ

"ಕರ್ನಾಟಕ ಶಿಕ್ಷಣ ಸಮಿತಿ" ಎಂಬ ಈ ಸಂಸ್ಥೆಯು ಕನ್ನಡ ನುಡಿಯ ಅಡಿಯಾಳಾಗಿ ಕಾರ್ಯ ಮಾಡಲಾರಂಭಿಸಿ ೯ ವರುಷಗಳಾದುವು ಆಗಿನಿಂದಲೂ ಪ್ರಸಿದ್ಧ ಲೇಖಕರಿಂದ ಮಹತ್ವದ ವಿಷಯಗಳ ಮೇಲೆ ಅದು ಪುಸ್ತಕಗಳನ್ನು ಬರೆಯಿಸಿ ಕನ್ನಡನುಡಿಗಡಲನ್ನು ಅಭಿವೃದ್ಧಿಗೊಳಿಸುತ್ತಲಿದೆ ಅವುಗಳೊಳಗಿನ ಅನೇಕ ಪುಸ್ತಕಗಳು ವರ್ಗ್ಯಪುಸ್ತಕಗಳಾಗಿಯೂ ವಾಚನಾಲಯ ಪುಸ್ತಕಗಳಾಗಿಯೂ ಶಾಲಾಧಿಕಾರಿಗಳಿಂದ ಮಾನ್ಯತೆಯನ್ನು ಪಡೆದಿವೆ ಈಗ ಪುನಃ ಸಮಿತಿಯು **"ಕರ್ನಾಟಕದ ವೀರರತ್ನಗಳು"** ಎಂಬೀ ಪುಸ್ತಕವನ್ನು **ಶ್ರೀ ಆಲೂರ ವೆಂಕಟರಾಯರಿಂದ** ಬರಯಿಸಿ ಪ್ರಕಾಶಗೊಳಿಸಿರುತ್ತದ ಇದರಲ್ಲಿ ಶ್ರೀ ಆಲೂರ್ಕವರು ಇಪ್ಪತ್ತೊಂದು ಮಂದಿ ಕನ್ನಡ ಕಡುಗಲಿಗಳ ಚರಿತ್ರೆಗಳನ್ನು ಐತಿಹಾಸಿಕ ಕಥೆಗಳ ರೂಪದಲ್ಲಿ ಕೊಟ್ಟಿರುವರು ಕನ್ನಡ ನುಡಿಯ ವೃದ್ಧಸೇವಕರಾದ ಶ್ರೀ ಆಲೂರವರ ಭಾಷೆ! ಈವರೆಗೆ ಯಾರೂ ಪ್ರಸಿದ್ಧಿಸದಿರುವ ಕನ್ನಡ ವೀರಮಣಿಗಳ ಹೃದಯಂಗಮವಾದ ಚರಿತೆ! ಅಂದಬಳಿಕ ಹೆಚ್ಚಿಗೆ ಹೇಳುವುದೇನು? ಗ್ರಂಥಕರ್ತರು ಇದನ್ನು ಅತ್ಯಂತ ಸ್ಫೂರ್ತಿದಾಯಕವಾದ ವೀರಭಾಷೆಯಲ್ಲಿ ಬರೆದಿರುವುದರಿಂದಲೂ ಚರಿತ್ರೆಗಳು ಬೇಸರವಾಗುವಂತಿರದೆ, ಮನೋರಂಜಕವಾಗಿರುವುದರಿಂದಲೂ ಕರ್ನಾಟಕದ ಅಭಿಮಾನಿಗಳೆಲ್ಲರೂ ವಿಶೇಷತಃ ತರುಣ ವಿದ್ಯಾರ್ಥಿಗಳು ಈಗಿನ ಕಾಲದಲ್ಲಿ ಇದನ್ನು ಓದಿ ಉತ್ಸಾಹಗೊಳ್ಳುವರೆಂದು ನಮಗೆ ವಿಶ್ವಾಸವಿದೆ **'ಭಾರತೀಯರ ಶ್ರೇಷ್ಠತ್ವ'** ವೆಂಬ ಇನ್ನೊಂದು ಪುಸ್ತಕವು ತುಸು ದಿನಗಳಲ್ಲಿಯೇ ಹೊರಬೀಳುವುದು ಆ ಪುಸ್ತಕದಲ್ಲಿ ನಮ್ಮ ಭಾರತೀಯರು

ಶಾಸ್ತ್ರ, ಕಲೆ, ಸಂಸ್ಕೃತಿ ಮುಂತಾದ ಪ್ರತಿಯೊಂದರಲ್ಲಿ ಹಿಂದಿನ ಕಾಲಕ್ಕೆ ಹೇಗೆ ಅತ್ಯಂತ ಶ್ರೇಷ್ಠರಿದ್ದರೆಂಬುದನ್ನು ಸಪ್ರಮಾಣವಾಗಿ ತೋರಿಸಿರುತ್ತದೆ

ಇದೇ ಪ್ರಕಾರಕ್ಕೆ ಕರ್ಣಾಟಕದ ಉನ್ನತಿಗೆ ಅವಶ್ಯವಾದ ಹೊಸ ಹೊಸ ಪುಸ್ತಕಗಳನ್ನು ವಿದ್ವಾಂಸರಾದ ಲೇಖಕರಿಂದ ಬರೆಯಿಸಿ ಪ್ರಕಟಿಸುವುದೇ ಸಮಿತಿಯ ಉದ್ದೇಶವಿರುವುದರಿಂದ ಲೇಖಕರು ಅಂತಹ ಲೇಖನಗಳನ್ನು ಸಮಿತಿಯವರಿಗೆ ಒಪ್ಪಿಸಿದಲ್ಲಿ ಮುದ್ರಿಸಲಾಗುತ್ತದೆ ಆದ್ದರಿಂದ ಈ ಎಲ್ಲ ಕಾರ್ಯಗಳಿಗೆ ಕನ್ನಡಿಗರೆಲ್ಲರೂ ಆಶ್ರಯವನ್ನಿತ್ತು ಸಮಿತಿಯ ಕೈಯಿಂದ ಹೆಚ್ಚಿನ ಸೇವೆಯನ್ನು ತೆಗೆದುಕೊಳ್ಳಬೇಕೆಂದು ಬೇಡಿಕೊಳ್ಳುತ್ತೇವೆ

ಧಾರವಾಡ,<br>
೧-೬-೩೦

ಕಾರ್ಯದರ್ಶಿ<br>
**ಹುಕ್ಕೇರಿ ರಾಮರಾಯರು**

ಶ್ರೀ

# ಪುಸ್ತಕ-ಪ್ರವೇಶ.

---

ಶ್ರೀ ರಾಮರಾವ ಹುಕ್ಕೇರಿಕರ ಇವರು ಕರ್ನಾಟಕದ ವೀರ ರತ್ನಗಳ ವಿಷಯವಾಗಿ ಪುಸ್ತಕವೊಂದನ್ನು ಬರೆಯಲಿಕ್ಕೆ ನಮಗೆ ಹೇಳಿದ ಕೂಡಲೆ, ಕಾರಣಾಂತರದಿಂದ ಒಂದು ಮುಂದಿನ ಯೋಚನ ಮಾಡದೆ ಒಪ್ಪಿಕೊಂಡು ಬಿಟ್ಟೆವು. ಸಾವಿರಾರು ವರ್ಷಗಳವರೆಗೆ, ಅತ್ಯಂತ ಅಟ್ಟಹಾಸದಿಂದ ಸಾಮ್ರಾಜ್ಯಗಳನ್ನು ಕಟ್ಟಿ ಆಳಿದ ಕರ್ನಾಟಕದಲ್ಲಿ ಒಂದು ಚಿಕ್ಕ ಪುಸ್ತಕಕ್ಕೆ ವೀರರತ್ನಗಳು ದೊರೆಯಲಾರವೇ - ಎಂದು ನಮ್ಮ ವಿಶ್ವಾಸ. ಆದರೆ ಪುಸ್ತಕವನ್ನು ಬರೆಯಲು ಪ್ರಾರಂಭಿಸಿದೊಡನೆ, ನಮಗೆ ಕೆಲವು ಅಡಚಣೆಗಳು ತೋರಿದುವು. ರತ್ನಗಳ ರಾಶಿಯನ್ನು ಬಾಲಕನೆದುರಿಗೆ ಇಟ್ಟಾಗ, ಆತನು ಆ ರಾಶಿಯೊಳಗಿಂದ ಯಾವುಗಳನ್ನು ಆರಿಸಿಕೊಳ್ಳಬೇಕೆಂಬುದು ತೋಚದೆ ಹೌಹಾರಿ ನಿಲ್ಲುವಂತೆಯೆ ನಮ್ಮ ಅವಸ್ಥೆಯಾಯಿತು. ಏನೋ, ನೂರಾರು ವರ್ಷ ಕಟ್ಟಿದ ಸಾಮ್ರಾಜ್ಯವಾಗಿದ್ದರೆ, ಆ ಅವಧಿಯಲ್ಲಿ ಆಗಿ ಹೋದ ಹತ್ತಿಪ್ಪತ್ತು ವೀರರು ಸಹಜವಾಗಿ ದೊರೆಯುತ್ತಿದ್ದರು. ಇಲ್ಲಿಯೋ, ಸಾವಿರಾರು ವರ್ಷಗಳ ಉಜ್ವಲವಾದ ಇತಿಹಾಸ. ಒಬ್ಬರಿಗಿಂತ ಒಬ್ಬರು ಮಿಗಿಲಾಗಿರುವ ನೂರಾರು ವೀರರು. ಅವರಲ್ಲಿ ಯಾರನ್ನು ಆರಿಸಬೇಕು, ಯಾರನ್ನು ಬಿಡಬೇಕೆಂಬುದು ನಮಗೆ ತೋಚದೆ ಹೋಯಿತು. ಅಲ್ಲದೆ ಕರ್ನಾಟಕದ ಇತಿಹಾಸವು ದೊಡ್ಡದಿದ್ದಷ್ಟು, ಸಾಧನಸಂಗ್ರಹವು ಚಿಕ್ಕವಾಗಿರುವುದರಿಂದಲೂ, ನಿಯತ ಕಾಲದಲ್ಲಿ ಪುಸ್ತಕವನ್ನು ಮುಗಿಸಬೇಕಾದುದರಿಂದಲೂ, ವೀರತ್ವದ ವಿವಿಧ ಮಾದರಿಗಳನ್ನಾರಿಸಲಿಕ್ಕೆ ಆಸ್ಪದವಾಗಲಿಲ್ಲ. ಕದಂಬ, ಚಾಲುಕ್ಯ, ರಾಷ್ಟ್ರಕೂಟ ಗಂಗ, ಕಲ್ಯಾಣಚಾಲುಕ್ಯ ವಿಜಯನಗರ—ಇವೇ ಮುಂತಾದ ಪ್ರಸಿದ್ಧ ರಾಜಮನೆತನಗಳೊಳಗಿಂದ ಹಲಕೆಲವು ವ್ಯಕ್ತಿಗಳನ್ನಾರಿಸಿ

ಕೊಂಡು ಅವರ ವೀರತ್ವದ ಚರಿತ್ರೆಯನ್ನು ಇದರಲ್ಲಿ ಕೊಟ್ಟಿರುವೆವು ಅಲ್ಲದೆ, ಒಬ್ಬ ಪಾಳೆಯಗಾರನ ಕುವರಲಕ್ಷ್ಮ, ಕುಮಾರ ರಾಮ ಎಂಬಿಬ್ಬ ತರುಣರ ಮತ್ತು ಅರಸಿಯಾದ ಅಕ್ಕಾದೇವಿ ಸಾಮಾನ್ಯ ವೀರಸ್ತ್ರೀಯಾದ ಓಬವ್ವ ಎಂಬಿಬ್ಬರು ಹೆಂಗಸರ ವೀರತ್ವವನ್ನೂ ವರ್ಣಿಸಿರುವೆವು ಕೇವಲ ಇತಿಹಾಸವನ್ನು ಬರೆವುದಾಗಲಿ, ಸಂಪೂರ್ಣ ಚರಿತೆಗಳನ್ನು ಬರೆವುದಾಗಲಿ ನಮ್ಮ ಉದ್ದೇಶವಲ್ಲ ಆದಕಾರಣ, ಈ ವೀರರ ಚರಿತ್ರೆಗಳನ್ನು ಇತಿಹಾಸಕ್ಕೆ ಬಿಡದಂತೆಯೂ ಓದಲಿಕ್ಕೆ ಮನೋರಂಜಕವಾಗುವಂತೆಯೂ ವರ್ಣಿಸಿರುವೆವು ಅರ್ಥಾತ್, ಆ ಕಾಲಕ ವೀರತ್ವವು ಸಾಮಾನ್ಯವಾಗಿ ಪ್ರದರ್ಶಿತವಾಗುವುದು ಯುದ್ಧಗಳಲ್ಲಿ ಆದುದರಿಂದ, ಈ ಪುಸ್ತಕದಲ್ಲಿ ಯುದ್ಧಗಳ ವರ್ಣನೆಗಳೇ ಬಹಳ ಈ ಪುಸ್ತಕವು ವಿಶೇಷತಃ ವಿದ್ಯಾರ್ಥಿಗಳ ಸಲುವಾಗಿಯೂ ಸಾಮಾನ್ಯ ಜನತೆಯ ಸಲುವಾಗಿಯೂ ಇರುತ್ತದೆಂಬುದನ್ನು ಲಕ್ಷದಲ್ಲಿ ತಂದು, ಈ ವೀರರ ಚರಿತ್ರೆಗಳನ್ನು ಓದಲಿಕ್ಕೆ ಬೇಸರವಾಗುವಂತೆ ಕೊಡದೆ, ಆದಷ್ಟು ಮಟ್ಟಿಗೆ ರುಚಿಕಟ್ಟಾಗುವಂತೆ ಕೊಟ್ಟಿರುವೆವು

ಇದಾಯಿತು ವಿಷಯದ ವಿಚಾರ ಇನ್ನು ಈ ಪುಸ್ತಕದ ಭಾಷೆಯ ಸಂಬಂಧವಾಗಿ ಎರಡು ಮಾತು ಹೇಳುವುದು ಅವಶ್ಯ ವೀರರ ಸಂಬಂಧದಿಂದ ಬರೆದ ಭಾಷೆಯು ವೀರ್ಯದಿಂದ ತುಂಬಿರಬೇಕು ಆದರೆ, ನಾವೆಲ್ಲರೂ ನಿರ್ವೀರ್ಯರಾಗಿರುವ ಈಗಿನ ಕಾಲದಲ್ಲಿ ವೀರತ್ವವನ್ನು ತರುವುದಲ್ಲಿಂದ? ಅಲ್ಲದೆ, ನಾವು ಕವಿಗಳೂ ಅಲ್ಲ, ಸ್ವಭಾವತಃ ಕ್ಷತ್ರಿಯರೂ ಅಲ್ಲ ಕನ್ನಡ ವೀರರ ವಿಷಯವಾಗಿ ನಮಗಿರುವ ಅಭಿಮಾನದಿಂದ ಪ್ರೇರಿತರಾಗಿ, ಈ ಪುಸ್ತಕದ ಭಾಷೆಗೆ ಆದಷ್ಟು ಮಟ್ಟಿಗೆ ವೀರತ್ವದ ಬಣ್ಣವನ್ನು ಕೊಡಲು ಮಾತ್ರ ಯತ್ನಿಸಿರುವೆವು ವೀರಶಾಸನಗಳನ್ನು ಓದುತ್ತಿರುವಾಗ ನಮಗೆ ಕೊನೆಕೊನೆಗೆ ಒಂದು ಹೊಸ ಮಾತು ಹೊಳೆಯಿತು ಅದೇನೆಂದರೆ, ಆ ವೀರಶಾಸನಗಳಲ್ಲಿಯ ಭಾಷೆಯಲ್ಲಿ ಒಂದು ವಿಲಕ್ಷಣವಾದ ತೇಜವು ತುಂಬಿರುತ್ತದೆಂಬುದು ಆಗಿನ ಕಾಲದಲ್ಲಿ ಜೀವಂತಜನರು ಜೀವಂತ ಭಾಷೆಯಲ್ಲಿ ಬರೆದ ವೀರಶಾಸನಗಳು ಅವು ಅಲ್ಲದೆ ಕವಿಗಳು ಕೇವಲ ಕಲ್ಪನಾಬಲ

ದಿಂದ ಬರೆದವುಗಳೂ ಅಲ್ಲ, ವೀರತ್ವದ ವಾತಾವರಣವನ್ನು ಪ್ರತ್ಯಕ್ಷ ಅನುಭವಿಸುತ್ತಿರುವಾಗ ಅವರ ಮನಸ್ಸಿನ ಮುಂದೆ ಪ್ರತ್ಯಕ್ಷವಾಗಿ ಸುಳಿದಾಡಿದ ಭಾವನೆಗಳು ಅವು. ಅವುಗಳಲ್ಲಿ ಆಗಿನ ಕಾಲದ ವೀರರ ಭಾಷೆಯು ದೊರೆಯುವಂತೆ ಮಿಕ್ಕೆಲ್ಲಿಯೂ ದೊರೆಯಲಾರದು. "ತಾಗಿ ತಳ್ತು ಇರಿದು ಕೊಂದನು" "ಸೇನೆಗಳು ತಾಗಿದವು" "ಬರಸಿಡಿಲನಂತೆರಗಿದನು" "ಸುರಿಗೆಕಾಳಗ" ಇವೇ ಮೊದಲಾದ ವೀರಗಲ್ಲಿನೊಳಗಿನ ಭಾಷೆಯನ್ನು ನಾವು ಈ ಪುಸ್ತಕದಲ್ಲಿ ಉಪಯೋಗಿಸಿರುವೆವು. ಒಬ್ಬ ಅರಸನು ತನ್ನ ಶತ್ರುವಿನ ಬಾಯಲ್ಲಿ ತನ್ನ ಖಡ್ಗವನ್ನಿಟ್ಟು ಅದಕ್ಕೆ ಸುರ್ರೆಂದು ನೀರನ್ನು ಉಣಿಸಿದನೆಂದೂ ಮತ್ತೊಬ್ಬನ ಮಸ್ತಕದ ಮೇಲೆ ಅವನ್ನು ಮಸೆದನೆಂದೂ ಮತ್ತೊಬ್ಬ ಶತ್ರುವಿನ ವದನವನ್ನೇ ಅದಕ್ಕೆ ಒರೆಯಾಗಿ ಮಾಡಿ ಅದರಲ್ಲಿ ಘಣ್ಣೆಂದು ಅದನ್ನು ಇಟ್ಟನೆಂದೂ ವರ್ಣನೆಯುಂಟು. ಶತ್ರುಗಳ ತಲೆಗಳನ್ನು ಕೊಡಗಳನ್ನಾಗಿಯೂ ಅವರ ಸೇನಾ ಸಮೂಹವನ್ನು ಗಾಲಿಯನ್ನಾಗಿಯೂ ಮಾಡಿ, ಯುದ್ಧರಂಗವೆಂಬ ಬಾವಿಯೊಳಗಿಂದ ಒಬ್ಬನು ತನ್ನ ಕೀರ್ತಿಲತೆಗೆ ರಕ್ತದ ನೀರನ್ನು ಯಾತ ಹೊಡೆದನಂತೆ! ಒಬ್ಬನು ಶತ್ರುಗಳ ಉರಗಳನ್ನು ಧೊಕ್ಕನೆ ಕುತ್ತಿ, ಚಕ್ಕನೆ ಭುಜದ್ವಂದ್ವಗಳಿಂದ ಅವುಗಳನ್ನೆತ್ತಿ, ವೀರಶ್ರೀಗೆ ಆ ದೊಡ್ಡ ಕರುಳುಗಳ ತೋರಣವನ್ನು ಕಟ್ಟಿದನಂತೆ! ಹೀಗೆ, ಸಾಮಾನ್ಯ ಜನರ ಕಣ್ಣಿಗೆ ಪ್ರತಿನಿತ್ಯ ಬೀಳುವ ಉದಾಹರಣೆಗಳಿಂದ ಭಯಂಕರವಾದ ಯುದ್ಧಗಳ ವರ್ಣನೆಯನ್ನು ಮಾಡುವುದು ಈಗ ಯಾರಿಗೆ ತಾನೇ ಸಾಧ್ಯವು? ಈ ಪುಸ್ತಕದಲ್ಲಿ ನಾವು ಈ ತರಹದ ವರ್ಣನೆಗಳನ್ನು ಅಲ್ಲಲ್ಲಿ ಶಿಲಾಲಿಪಿಗಳಿಂದ ಎತ್ತಿಕೊಂಡಿರುವೆವು. ವೀರರಿಗೆ ಹಚ್ಚುವ ಬಿರುದುಗಳೂ ವಿಶೇಷಣಗಳೂ ಶಿಲಾಲಿಪಿಗಳಲ್ಲಿ ಹೇರಳವಾಗಿ ದೊರೆಯುತ್ತವೆ. ರಣರಸಿಕ, ರಣರಾಗ, ರಣರಂಗಸಿಂಗ, ಪರಬಲಶಾರ್ದೂಲ, ವೀರಮಾರ್ತಂಡ—ಇವೇ ಮುಂತಾದ ನೂರಾರು ಶಬ್ದಗಳನ್ನು ನಾವು ಅಲ್ಲಿ ಕಾಣಬಹುದು. ಅವುಗಳನ್ನು ನಾವು ಈ ಪುಸ್ತಕದಲ್ಲಿ ವಿಶೇಷಣಗಳನ್ನಾಗಿ ಉಪಯೋಗಿಸಿರುವೆವು. ಕನ್ನಡ ವಾಙ್ಮಯದಲ್ಲಿ ಹೊಸ ತರಹದ ವೀರ ಭಾಷಾಶೈಲಿಯೊಂದನ್ನು ಹುಟ್ಟಿಸುವುದಕ್ಕೆ ನಾವು ಈ ಪುಸ್ತಕದಲ್ಲಿ ಅಲ್ಪ ಮಟ್ಟಿಗೆ ಪ್ರಯತ್ನಿಸಿರುವೆವು. ಹಳೆಗನ್ನಡ

ಶಬ್ದಪ್ರಯೋಗಗಳನ್ನು ರೂಢಿಯಲ್ಲಿ ತರುವಾಗ, ಹೊಸಗನ್ನಡಕ್ಕೆ ಬೆಸಿಗೆ ಹೊಂದುವಂತೆಯೂ ಸಂದರ್ಭದಿಂದ ಅರ್ಥವು ತಿಳಿಯುವಂತೆಯೂ ನಾವು ಎಚ್ಚರಪಟ್ಟಿರುವೆವು ನಮಗಿಂತ ಸಮರ್ಥರಾದ ವಾಙ್ಮಯಭಕ್ತರು ಈ ಮಾರ್ಗದಿಂದ ಪ್ರಯತ್ನಮಾಡಿ, ಹೊಸಗನ್ನಡದಲ್ಲಿ ಹೊಸ ವೀರಶೈಲಿಯೊಂದನ್ನು ಪರಿಪಕ್ವದೆಶೆಗೆ ತರಬೇಕೆಂದು ನಮ್ಮ ಪ್ರಾರ್ಥನೆ

ಉತ್ತರ ಕರ್ನಾಟಕದಲ್ಲಿಯ ೧೫-೨೦ ಸಾವಿರ ಶಿಲಾಲಿಪಿಗಳು ಧೂಳ ತಿನ್ನುತ್ತ ಬಿದ್ದಿರುವವು ಆವೆಲ್ಲ ಶಿಲಾಲಿಪಿಗಳು ಬೆಳಕಿಗೆ ಬಂದರೆ, ವೀರತ್ವದ ವಿಧವಿಧವಾದ ಮಾದರಿಗಳೂ ನಮಗೆ ದೊರೆಯಬಹುದು, ವೀರಭಾಷೆಯ ಸಾಮ್ರಾಜ್ಯವೂ ನಮ್ಮ ಕೈಗೆ ಸಿಕ್ಕಬಹುದು ಆಗ, ಈ ಪುಸ್ತಕದೊಳಗಿನ ಮುಖ್ಯವಾದ ಕುಂದುಗಳು ದೂರಾಗುವುವು ಅಲ್ಲಿಯವರೆಗೆ ಕನ್ನಡಿಗರು ಇಂಥ ಅಪೂರ್ಣವಾದ ಪ್ರಯತ್ನಗಳಿಂದಲೇ ತೃಪ್ತರಾಗಬೇಕಾಗಿದೆ ಇರಲಿ.

ಇಲ್ಲಿಗೆ, ಪುಸ್ತಕಪ್ರವೇಶ ವಿಧಿಯು ಅಥವಾ ವಾಸ್ತುವಿಧಿಯು ಸಮಾಪ್ತವಾಯಿತು ಕೊನೆಗೆ, ಈ ಪುಸ್ತಕವನ್ನು ಬರೆಯುವುದರಲ್ಲಿ ನಮಗೆ ಸಹಾಯ ಮಾಡಿದ ನಮ್ಮ ತರುಣಮಿತ್ರರಾದ ಶ್ರೀ ಮೇವುಂಡಿ ಮಲ್ಹಾರರಾಯರ ಉಪಕಾರವನ್ನು ಸ್ಮರಿಸುವುದು ಅವಶ್ಯವಿದೆ ಅದೇ ಮೇರೆಗೆ, ಈ ಪುಸ್ತಕವನ್ನು ಬರೆಯಲಿಕ್ಕೆ ಪ್ರೋತ್ಸಾಹಿಸಿ ಆಶ್ರಯಕೊಟ್ಟ ಕರ್ನಾಟಕ ಶಿಕ್ಷಣ ಸಮಿತಿಗೂ ಪುಸ್ತಕವನ್ನು ತೀವ್ರ ಮುದ್ರಿಸಿದ ಬೆಂಗಳೂರಿನ ಯೂನಿವರ್ಸಲ್ ಪವರ್ ಪ್ರೆಸ್ಸಿನವರಿಗೂ ವಂದನೆಗಳನ್ನು ಸಮರ್ಪಿಸಿ ಈ ಪ್ರಸ್ತಾಪನೆಯನ್ನು ಮುಗಿಸುತ್ತೇವೆ

ಧಾರವಾಡ
ಪ್ರಮೋದ ಸಂವತ್ಸರ
ವೈಶಾಖ ಶುದ್ಧ ೩ (ಅಕ್ಷಯ ತೃತೀಯ)
೧—೫—೧೯೩೦

ಆಲೂರ ವೆಂಕಟರಾಯ.





ಬೇಗೂರಿನಲ್ಲಿ ನಾಗತ್ತರಸೆಂಬವನು ಅಯ್ಯಪ್ಪನೊಡನೆ ೮೯೦ರಲ್ಲಿ ಮಾಡಿದ ಆನೆಕಾಳಗದ ದೃಶ್ಯವಿದು. ಕೆತ್ತಿಗೆಯ ಕೆಲಸವು ಹುರುಬರ ಕಾಗಿದ್ದರೂ ಹಿಂದಿನ ಯುದ್ಧಗಳ ಕಲ್ಪನೆಯನ್ನು ಕೊಡುತ್ತದೆ.

## ಅಭಿಮಾನಮೇರುವಾದ

# ಮಯೂರವರ್ಮ

---

## (೩ನೆಯ ಶತಮಾನ)

ಪ್ರಶಾಂತವಾಗಿಯೂ ಗಂಭೀರವಾಗಿಯೂ ಹರಿವ ಪ್ರವಾಹಕ್ಕೆ ಎಲ್ಲಿಯಾದರೂ ನಡುವೆ ತಡೆಯುಂಟಾದಲ್ಲಿ, ಅದರೊಳಗಿನ ಶಕ್ತಿಯೆಲ್ಲವೂ ಒಂದೆಡೆಗೆ ಸಂಚಿತವಾಗಿ, ಅದರಿಂದ ಅನೇಕ ಅದ್ಭುತ ಕಾರ್ಯಗಳುಂಟಾಗುವುದನ್ನು ನಾವು ಈ ಸೃಷ್ಟಿಯಲ್ಲಿ ಪದೇಪದೆ ಕಾಣುತ್ತೇವೆ ಗೋಕಾಕ್, ಶಿವಸಮುದ್ರ, ಕೃಷ್ಣರಾಜಸಾಗರ ಮುಂತಾದ ಸ್ಥಳಗಳಲ್ಲಿಯ ತಡಸಲುಗಳನ್ನೂ ಅಣೆಕಟ್ಟುಗಳನ್ನೂ ನೋಡಿದರೆ ಈ ಮಾತು ಮನವರಿಕೆಯಾಗುವುದು ಮಾನವ ಜೀವನದಲ್ಲಿಯೂ ತೇಜಸ್ವಿಗಳಿಗೆ ತುಸು ತಡೆಯುಂಟಾದೊಡನೆಯ ಅವರ ಮೈಯಲ್ಲಿ ಆವೇಶ ತುಂಬಿ ಅವರಿಂದ ಅಘಟಿತ ಕೃತ್ಯಗಳು ಘಟಿಸುತ್ತವೆ ಮಯೂರಶರ್ಮನೆಂಬೊಬ್ಬ ಬ್ರಾಹ್ಮಣನ ಸ್ವಾಭಿಮಾನಜೀವನದ ಹೊಳೆಯಲ್ಲಿ ಇದೇ ತೆರನದ ಒಂದು ತಡೆಯುಂಟಾಯಿತು ಅದರಿಂದ ಆವಿರ್ಭವಿಸಿದ ವಿಲಕ್ಷಣ ತೇಜದ ಮೂಲಕ, ಆ ಬ್ರಾಹ್ಮಣನು ಅಲ್ಪಾವಧಿಯಲ್ಲಿ ಹೊಸದೊಂದು ರಾಜ್ಯವನ್ನು ಕಟ್ಟಿ ಅರಸನಾದನು

ಈಗ ಸರಾಸರಿ ೧೭೦೦ ವರ್ಷಗಳ ಹಿಂದಿನ ಮಾತು ಶಿವಮೊಗ್ಗೆಯ ಜಿಲ್ಲೆಯಲ್ಲಿರುವ ತಾಳಗುಂದ (ಸ್ಥಾನಕುಂದೂರು) ದಲ್ಲಿ ಮಯೂರಶರ್ಮನೆಂಬೊಬ್ಬ ಬ್ರಾಹ್ಮಣನಿದ್ದನು ಆತನ ಪೂರ್ವಜರು ವಿವಿಧಯಜ್ಞಾವಭೃತಪುಣ್ಯರು, ಸ್ವಾಧ್ಯಾಯಚರ್ಚಾಪರರು, ಶ್ರುತಿಶೀಲಶೌಚಾದ್ಯಲಂಕೃತರು, ತಮ್ಮ ಗೃಹಸಮೀಪ ಪ್ರದೇಶದಲ್ಲಿ ಬೆಳೆದಿರುವ ದೊಡ್ಡದೊಂದು ಕಡವಾಲ (ಕದಂಬ) ಮರದ ಮೂಲಕ "ಕದಂಬ"ರೆಂಬ

ಅಪರನಾಮಧೇಯವುಳ್ಳವರು ಮಯೂರಶರ್ಮನೂ ಪರಂಪರಾಗತ ವೇದಾಧ್ಯಯನದಲ್ಲಿ ತತ್ಪರನು ಆಗಿನ ಕಾಲದಲ್ಲಿ ಮಯೂರಶರ್ಮನ ಜನ್ಮಭೂಮಿಯಾದ ಆ ಪ್ರದೇಶವು ಪಲ್ಲವ ಅರಸರ ಅಂಕಿತದಲ್ಲಿದ್ದುದರಿಂದ, ಅಲ್ಲಿ ಹೆಚ್ಚಿನ ಶಿಕ್ಷಣದ ಅನುಕೂಲತೆಗೆ ಎಡೆಯಿರಲಿಲ್ಲ ಪಲ್ಲವ ನರೇಂದ್ರರು ತಮ್ಮ ರಾಜಧಾನಿಯಾದ ಕಂಚೀನಗರದಲ್ಲಿಯೇ ಉಚ್ಚ ಶಿಕ್ಷಣದ ಸಂಸ್ಥೆಗಳೆಲ್ಲವನ್ನೂ ಕೇಂದ್ರೀಕರಿಸಿದ್ದರು ಕಂಚೀನಗರವು ವಿವಿಧವಾದ ಐಶ್ವರ್ಯದ ಆಗರವಾದುದಲ್ಲದ, ಸಕಲ ಕಲೆಗಳ ಸಲೆವೀಡಾಗಿಯೂ ವಿದ್ಯೆಗಳ ತವರೂರಾಗಿಯೂ ಕಂಗೊಳಿಸುತ್ತಿತ್ತು ಅಲ್ಲಿ, ಶ್ರುತಿ, ಸ್ಮೃತಿ, ವ್ಯಾಕರಣ, ಅರ್ಥಶಾಸ್ತ್ರ, ಸಾಹಿತ್ಯ, ಇತಿಹಾಸ—ಇವೇ ಮುಂತಾದ ಅನೇಕ ವಿಷಯಗಳನ್ನು ಕಲಿಸುವಂತಹ ನೂರಾರು ಘಟಿಕಾಸ್ಥಾನ (ಪಾಠಶಾಲೆ) ಗಳು ಭರದಿಂದ ಬೆಳೆದಿದ್ದುವು ಅವುಗಳಲ್ಲಿ, ಸಾವಿರಾರು ವಿದ್ಯಾರ್ಥಿಗಳು ದೇಶದೇಶಗಳಿಂದ ಬಂದು ವೇದಾದಿಗಳನ್ನು ಪಠಣಮಾಡುತ್ತಿದ್ದರು. ಮಯೂರಶರ್ಮನೂ ಆ ಪಟ್ಟಣಕ್ಕೆ ಹೋಗಿ, ಹೆಚ್ಚಿನ ಜ್ಞಾನಾರ್ಜನೆಮಾಡತೊಡಗಿದನು ಆತನು ಸದಾ ತನ್ನ ಅಭ್ಯಾಸದಲ್ಲಿ ನಿಮಗ್ನ, ಮಿಕ್ಕಾವ ವಿಷಯವನ್ನೂ ಅರಿಯದವ, ಮತ್ತೊಬ್ಬರ ಗೋಜಿಗೆ ಹೋಗದವ ಹೀಗಿರಲು, ಪಲ್ಲವೇಂದ್ರನ ಕುದುರೆಯ ಲಾಯದವರು ಆತನನ್ನು ನಿಷ್ಕಾರಣವಾಗಿ ಕೆಣಕಿ ಕಾಲುಕೆದರಿ ಜಗಳ ತೆಗೆದು, ಆತನಿಗೆ ಸಿಕ್ಕ ಸಿಕ್ಕಂತೆ ಬೈದು ಅವಮಾನಗೊಳಿಸಿದರು ತಾವು ಅರಸನ ಆಳುಗಳೆಂದು ಅವರಿಗೆ ಬಲವಾದ ಹೆಮ್ಮೆ! ಮಯೂರಶರ್ಮನಂತಹ ತೇಜಸ್ವಿಯು ಮದ್ದಾಳುಗಳ ಆ ಅವಹೇಳನವನ್ನು ಸಹಿಸುವುದೆಂತು? ಕೂಡಲೆ ಮಯೂರಶರ್ಮನು ನೆಟ್ಟಗೆ ಪಲ್ಲವೇಂದ್ರನ ಬಳಿಗೆ ಹೋಗಿ, ಆ ಆಳುಗಳು ತನಗೆ ಮಾಡಿದ ಅಪರಾಧಕ್ಕೋಸ್ಕರ ಅವರನ್ನು ದಂಡಿಸಬೇಕೆಂದು ಕೇಳಿಕೊಂಡನು ಅಧಿಕಾರಿಗಳಿಗೆ ಆಳುಗಳ ಅಪರಾಧಗಳನ್ನೆತ್ತಿ ಹಿಡಿಯುವುದೊಂದು ದುಶ್ಚಟ ಪಲ್ಲವೇಂದ್ರನು ಆ ಬಡ ಹಾರುವನ ನುಡಿಗೆ ಕಿವಿಗೊಡಲಿಲ್ಲವೆಂಬುವಷ್ಟೇ ಅಲ್ಲ, ಮರಳಿ, ಮಯೂರಶರ್ಮನನ್ನೇ ದೂಷಿಸತೊಡಗಿದನು! ಅದನ್ನು ಸಹಿಸುವುದು ಮಯೂರಶರ್ಮನಿಗೆ ಶಕ್ಯವಾಗಿದ್ದಿಲ್ಲ ಆತನು ಮತ್ತಷ್ಟು ಕೆರಳಿ ಕಿಡಿಕಿಡಿಯಾದನು ಪಲ್ಲವೇಂದ್ರನು ಬಲಾಢ್ಯ

ನಾದ ಅರಸನೆಂಬುದರ ಅರಿವು ಕೂಡ ಆಗ ಆತನಿಗೆ ಉಳಿಯಲಿಲ್ಲ. ಆತನ ನೆತ್ತರವು ಬಿಸಿಯಾಯಿತು ಮತ್ತು ತತ್‌ಕ್ಷಣದಲ್ಲಿ, ಹಿಂದಕ್ಕೆ ನವನಂದರು ಮಾಡಿದ ಅಪಮಾನದಿಂದ ರೇಗಿಗೆದ್ದು, ಚಾಣಕ್ಯನು ಅವರನ್ನು ನಿರ್ಮೂಲನಮಾಡುವುದಕ್ಕೆ ಘೋರ ಪ್ರತಿಜ್ಞೆಯನ್ನು ಮಾಡಿದಂತೆಯೇ, ಮಯೂರಶರ್ಮನೂ ಪಲ್ಲವೇಂದ್ರನನ್ನು ಸಮೂಲವಾಗಿ ಉತ್ಪಾಟನ ಮಾಡುವುದಕ್ಕೆ ಭೀಷ್ಮ ಪ್ರತಿಜ್ಞೆಯನ್ನು ಮಾಡಿದನು. ಮದ್ದಾನಯಂತ ಮೆರೆವ ಆ ಮದಾಂಧರಾಜನ ಸೊಕ್ಕನ್ನಡಗಿಸದಿದ್ದರ ತಾನು ಮಯೂರಶರ್ಮನಲ್ಲವೆಂಬುದೇ ಆತನ ಶಪಥ! ಮಯೂರಶರ್ಮನು ಜನ್ಮತಃ ಬ್ರಾಹ್ಮಣನಾಗಿದ್ದರೂ ಆತನ ಧಮನಿಗಳಲ್ಲಿ ಕ್ಷಾತ್ರರಕ್ತವು ಹರಿಯುತ್ತಿತ್ತು. ಅದು ಈ ಅಪಮಾನದಿಂದ ಕುದಿಗೊಂಡು ಉಕ್ಕಳಿಸಿತು "ಕಲಿಯುಗದಲ್ಲಿ ಈ ಅರಸರ ಗರ್ವವೆಷ್ಟು ನೋಡಿರಿ! ಅವರು ಕಂಡಕಂಡವರನ್ನು ಕಂಡಕಂಡಂತೆ ತುಚ್ಛೀಕರಿಸುವರಲ್ಲ! ತಾವೊಬ್ಬರೆ ಶೂರರು-ಧೀರರು ಎಂದು ತಿಳಿದುಕೊಂಡು ಅವರು ಮೈಮರೆದಿರುವರು! ನಮ್ಮಿಷ್ಟಕ್ಕೆ ನಾವು ಗುರುಕುಲಗಳಲ್ಲಿ ಶಾಂತರೀತಿಯಿಂದ ಅಧ್ಯಯನ ಮಾಡುವುದಕ್ಕೂ ನಮಗ ವಿದ್ಯಾಸ್ವಾತಂತ್ರ್ಯವಿರಬೇಡವೆ? ಬ್ರಹ್ಮಸಿದ್ಧಿಯೂ ಕೂಡ ನೃಪಾಧೀನವಾಗಿರಬೇಕೆ? ಇದಕ್ಕೂ ಶೋಚನೀಯವಾದ ಸಂಗತಿ ಇನ್ನಾವುದಿರಬೇಕು? ಛೇ! ತೇಜಸ್ವಿಗಳಿಗಿದು ತಕ್ಕುದಲ್ಲ. ದುಷ್ಟನಿಗ್ರಹವೂ ಶಿಷ್ಟರಕ್ಷಣವೂ ಕ್ಷತ್ರಿಯರ ಮಾತ್ರವೇ ಕರ್ತವ್ಯವಲ್ಲ. ಅದು ಸಕಲ ಭಗವದ್ಭಕ್ತರ ಪವಿತ್ರ ಕರ್ತವ್ಯ" ಎಂದು ಬಗೆದು ತನಗುಂಟಾದ ಅಪಮಾನದ ಕಳಂಕವನ್ನು ರಕ್ತಸೇಚನದಿಂದಲೇ ತೊಳೆವುದು ಲೇಸೆಂದು ಭಾವಿಸಿದನು. ಪಲ್ಲವೇಂದ್ರನ ಹಲ್ಲುಮುರಿದು ತನ್ನ ಜನ್ಮಭೂಮಿಯಾದ ಬನವಾಸಿ ದೇಶಕ್ಕೆ ಸ್ವಾತಂತ್ರ್ಯವನ್ನು ಸಂಪಾದಿಸಿ, ಕೊಟ್ಟು ತಾನು ದೊರೆಯಾಗಬೇಕೆಂಬ ಉನ್ನತವಾದ ಆಶೆಯನ್ನು ತಾಳಿದನು. ಕುಶ ಸಮಿತ್ತುಗಳನ್ನು ಧಾರಣ ಮಾಡುವುದರಲ್ಲಿ ದಕ್ಷವಾದ ಆತನ ಕೈಗಳು ಕ್ರೂರವಾದ ಶಸ್ತ್ರಾಸ್ತ್ರಗಳನ್ನು ಗ್ರಹಣಮಾಡಿದುವು, ವೇದಘೋಷದ ಬದಲು ಆತನ ಮುಖದಿಂದ ರಣಗರ್ಜನೆ ಹೊರಹೊಮ್ಮಲಾರಂಭಿಸಿತು. ಪ್ರವಚನ ಪಟುವಾದ ಮಯೂರ**ಶರ್ಮ**ನು ಪರಾಕ್ರಮ ಪಟುವಾದ ಮಯೂರ**ವರ್ಮ**ನಾದನು.

ಆತನು ಮೊದಲು ಕಂಚೀನಗರದಲ್ಲಿ ರಾಜದ್ರೋಹದ ದಾಹವನ್ನು ಹಬ್ಬಿಸಲಾರಂಭಿಸಿದನು ಪಲ್ಲವೇಂದ್ರನಿಗೆ ಇದು ಗೊತ್ತಾದೊಡನೆಯೆ ರಾಜದ್ರೋಹಿಯಾದ ಆತನನ್ನು ಸೆರೆ ಹಿಡಿದು ಎಳೆತರುವುದಕ್ಕೆ ನಗರ ರಕ್ಷಕರಿಗೆ ಆಜ್ಞಾಪಿಸಿದನು ಇನ್ನು ಆ ಊರಲ್ಲಿ ಉಳಿವುದು ತನ್ನ ಮುಖ್ಯೋದ್ದೇಶಕ್ಕೆ ಭಂಗ ತರಬಹುದೆಂದೆಣಿಸಿ, ಆ ಸಾಹಸಭೀಮನು ಪುಟ ಚೆಂಡಿನಂತೆ ಹಾರಿ ಕಾವಲುಗಾರರ ಕೈಯೊಳಗಿಂದ ಜಾರಿ ಪಾರಾಗಿ, ಶ್ರೀಪರ್ವತದ ಬಳಿ ಇರುವ ಅಭೇದ್ಯವಾದ ಕಾನನವನ್ನು ಸೇರಿದನು ಅಲ್ಲಿ ಆತನಿಗೊದಗಿದ ಪರಿಪರಿಯ ವನವಾಸ ಕಷ್ಟಗಳನ್ನು ಬಣ್ಣಿಸಲಳವಲ್ಲ ಆದರೆ ಧೀರರ ಧೀರನಾದ ಆತನು ಆ ವಿಪತ್ತುಗಳಿಗೆ ಲೇಶ ಮಾತ್ರವೂ ಸೊಪ್ಪು ಹಾಕಲಿಲ್ಲ ಕಾಡಿನಲ್ಲಿಯೇ ಇರಲಿ, ನಾಡಿನಲ್ಲಿಯೇ ಇರಲಿ, ಬಂಟನು ಯಾವಾಗಲೂ ಬಂಟನೆ ಆ ವೀರ ಮಾರ್ತಾಂಡನು ಗುಡ್ಡಗಾಡು ಪ್ರದೇಶದಲ್ಲಿರುವ ಮಲೆ-ಯಾಳುಗಳನ್ನು ಕಲೆಹಾಕಿ ತನ್ನ ಸುತ್ತಲು ಬಿಲ್ಲಾಳುಗಳ ಸಮೂಹವನ್ನು ಒಟ್ಟೈಸಿಕೊಂಡನು. ಅವರಿಗೆ ತಾನು ಅಧಿನಾಯಕನಾಗಿ ನೆರೆಯಲ್ಲಿದ್ದ ಬೃಹದ್ಬಾಣನೆಂಬ ಭೂಪಾಲನನ್ನು ತನ್ನ ಬಾಣಗಳ ಸುರಿಮಳೆಯಿಂದ ಜರ್ಜರಿತವಾಗಿ ಮಾಡಿ, ಆತನಿಂದಲೂ ಮಿಕ್ಕ ಅನೇಕ ರಾಯರುಗಳಿಂದಲೂ ಕಪ್ಪಕಾಣಿಕೆಗಳನ್ನೆತ್ತಿದನು ಅತುಲ ಸಾಹಸದಿಂದಲೂ ವಿಲಕ್ಷಣವಾದ ಧೈರ್ಯದಿಂದಲೂ ಸುತ್ತಲಿನ ಅನೇಕ ನರಪತಿಗಳನ್ನಳುಕಿಸಿ, ಅವರನ್ನು ತನ್ನಂಕೆಯಲ್ಲಿ ತೆಗೆದುಕೊಂಡನು ಈ ಸುದ್ದಿಯನ್ನು ಕೇಳಿದೊಡನೆ ಪಲ್ಲವೇಂದ್ರನ ಹುಬ್ಬುಗಳು ಗಂಟಿಕ್ಕಿದುವು. ಮಯೂರವರ್ಮನು ಕಾಲಿಟ್ಟೆಡೆಯಲ್ಲಿ ಆತನನ್ನು ಹಿಡಿದು ಕಟ್ಟುವುದಕ್ಕೋಸ್ಕರ ಪಲ್ಲವೇಂದ್ರನು ನಾನಾ ವಿಧವಾದ ಬಲೆಗಳನ್ನೊಡ್ಡಿದನು. ಆ ವಿಪನ್ನಾವಸ್ಥೆಯಲ್ಲಿ ಮಯೂರವರ್ಮನು ಬಗೆಬಗೆಯ ವೇಷಗಳನ್ನು ಧರಿಸಿಕೊಂಡು, ವೈರಿಗಳ ಮೋರೆಗೆ ಮಂಕುಬೂದಿಯನ್ನು ಎರಚಿ, ಕಣ್ಣು ತಪ್ಪಿಸಿ ಜಿಗಿದು, ಮತ್ತೆ ಅವರ ವಿರುದ್ಧವಾಗಿ ತೊಡೆ ಚಪ್ಪರಿಸಿ ನಿಂತನು! ಕೊನೆಗೆ ಪಲ್ಲವೇಂದ್ರನು ಬೇಸತ್ತು ಮಯೂರವರ್ಮನನ್ನು ಮೆಟ್ಟುವುದಕ್ಕೆ ದೊಡ್ಡದೊಂದು ದಂಡನ್ನೇ ಅಟ್ಟಿದನು. ತಿವ್ರವೇ ತಾನೂ ಬಂದು ಇದಿರಾದನು. ಬಹು ದಿವಸಗಳಿಂದ ಹೊಂಚುಹಾಕಿಕೊಂಡು ಕುಳಿತಿದ್ದ ಮಯೂರವರ್ಮ

ಷ್ಣಿಗೆ ಇದೊಂದು ಸುಸಂಧಿಯು ತಾನಾಗಿಯೇ ಪ್ರಾಪ್ತವಾದಂತಾಯಿತು. ಮಯೂರವರ್ಮನು ಚಿಕ್ಕದೊಂದು ಪಡೆಯನ್ನು ತಗೆದುಕೊಂಡು, ಪಲ್ಲವ ಸೈನ್ಯದ ಮೇಲೆ ಅಕಸ್ಮಿಕವಾಗಿ ಗಿಡಗವಂತೆ ದೊಪ್ಪನ ಹಾರಿ ಬಿದ್ದನು. ಅವೆರಡು ಸೇನೆಗಳ ನಡುವೆ ತುಮುಲವಾದ ಯುದ್ಧವಾಯಿತು ಪರಬಲ ಶಾರ್ದೂಲನಾದ ಆತನು ತನ್ನ ಮೇಲೆ ಕವಿದು ಬರುವ ತುಳಿಲಾಳುಗಳನ್ನು ತುಳಿದು ತುಂಡರಿಸಿ, ಭುಜಖಡ್ಗದಿಂದ ಇರಿದಿರಿದು ದಸಬಲಿಗೆಯ್ದು, ಅದನ್ನು ಚೆಲ್ಲಾಪಿಲ್ಲಿಯಾಗಿ ಮಾಡಿದನು ಆಗ, ತಾನು ಪ್ರಬಲ ಪ್ರತಾಪಾನ್ವಯದಲ್ಲಿ ಹುಟ್ಟಿದ ಚಕ್ರವರ್ತಿಯೆಂಬ ಪಲ್ಲವೇಂದ್ರನ ಗರ್ವವು ಭಂಗವಾಯಿತು ಆತನ ಶೌರ್ಯಸಾಹಸಗಳೆಲ್ಲವೂ ಹೇಳ ಹೆಸರಿಲ್ಲದ ಹೋದುವು ರಣದೇವತೆಯ ಮೆಚ್ಚನ್ನು ಪಡೆದು ನಲಿಯುತ್ತಿದ್ದ ಮಯೂರನಡೆಗೆ, ಆತನು ಬಾಯಿಯಲ್ಲಿ ಹುಲ್ಲು ಕಚ್ಚಿಕೊಂಡು ಬಂದು ಶರಣಾಗತನಾಗಿ ಒಡಂಬಡಿಕೆ ಮಾಡಿಕೊಂಡು ಮಿತ್ರನಾದನು. ಈ ಸಂಧಿಯಲ್ಲಿ ಮಯೂರವರ್ಮನು ತನ್ನ ಜನ್ಮಭೂಮಿಗೆ ಸ್ವಾತಂತ್ರ್ಯವನ್ನು ಸಂಪಾದಿಸಿಕೊಟ್ಟು ತಾನೇ ಅರಸನಾಗಿ ಕದಂಬ ಕುಲಸ್ಥಾಪಕನಾದನು. ಉದ್ಘೋಷಿಸುವ ತೆರಂಗಮಾಲೆಗಳಿಂದೊಪ್ಪುವ ಪಡುವಣಗಡಲ ಮೊದಲ್ಗೊಂಡು ತನ್ನ ಹುಟ್ಟೂರಾದ ಸ್ಥಾನಕುಂದೂರನ್ನೊಳಗೊಂಡ ಯಾವತ್ತೂ ಪ್ರದೇಶದಲ್ಲಿ ಮಿಕ್ಕ ಯಾವ ಅವನೀಶ್ವರರೂ ಕಾಲಿಡಕೂಡದೆಂದು ಕಟ್ಟಪ್ಪಣೆಯನ್ನು ವಿಧಿಸಿದನು ವೈಜಯಂತಿ ಅಥವಾ ಬನವಾಸಿಯು ಈ ನವರಾಜ್ಯದ ರಾಜಧಾನಿಯಾಯಿತು ಆದರ ಇಷ್ಟಕ್ಕೆ ಅವನ ಇಚ್ಛೆ ಪರಿಪೂರ್ಣವಾಗಲಿಲ್ಲ ಪಲ್ಲವೇಂದ್ರನ ಮಾನಭಂಗಮಾಡಿ ಅತನಿಂದ ತನಗುಂಟಾದ ಅಪಮಾನದ ಕಲುಷವನ್ನು ತೊಳೆವ ಕೆಲಸ ಒಂದು ಉಳಿದಿತ್ತು ಅದಕ್ಕೋಸ್ಕರ ಅತನು ವೈಜಯಂತೀ ನಗರದಲ್ಲಿ ತನ್ನ ಪಟ್ಟಬಂಧೋತ್ಸವವನ್ನು ಹೂಡಿ, ವಲ್ಲವೇಂದ್ರನು ತಾನೇ ಅಲ್ಲಿಗೆ ಬಂದು ಪಟ್ಟಬಂಧಸಂಪೂಜೆಯನ್ನು ನೆರವೇರಿಸಬೇಕೆಂದು ಅಜ್ಞಾಪಿಸಿದನು! ಆ ಮೇರಗೆ ಪಲ್ಲವೇಂದ್ರನು ಅಲ್ಲಿಗೆ ಬಂದು, ಮಯೂರವರ್ಮನ ತಲೆಯ ಮೇಲೆ ಮಣಿಮುಕುಟವನ್ನಿಟ್ಟು, ತನ್ನ ಕರಪಲ್ಲವಗಳಿಂದ ಪಟ್ಟಬಂಧ

ಸಂಪೂಜೆಯನ್ನು ಪೂರ್ತಿಗೊಳಿಸಿದನು! ಆಗ ಮಯೂರವರ್ಮನು ತಾನು ಕೃತಕೃತ್ಯನಾದೆನೆಂದು ಬಗೆದನು.

ಈ ಬಗೆಯಾಗಿ, ಸ್ವಾಭಿಮಾನದ ಮೂರ್ತಿಯಾದ ಮಯೂರಶರ್ಮನು ತನ್ನ ಮಿಗಿಲಾದ ಪರಾಕ್ರಮದಿಂದಲೂ ಅದ್ವಿತೀಯ ಸಾಹಸದಿಂದಲೂ ಮೆರೆದು ಯಶೋದುಂದುಭಿಯನ್ನು ದಿಗಂತದಲ್ಲಿ ಮೊಳಗಿಸಿದನು.

---

## ಪ್ರೌಢಪ್ರತಾಪಿಯಾದ

# ಶ್ರೀ ಸತ್ಯಾಶ್ರಯ ಪುಲಿಕೇಶಿ

---

(೬೦೯-೬೪೨)



ಎರಡು ಮಹಾ ಸಾಗರಗಳು ಆರ್ಭಟಿಸುತ್ತ ಬಂದು ಒಂದಕ್ಕೊಂದು ತಕ್ಕೈಹಾಯ್ದುವೆಂದರೆ, ಭಯಂಕರವಾದ ಅಲ್ಲೋಲ ಕಲ್ಲೋಲವುಂಟಾಗಿ ಭೋರೆಂಬ ಗಂಭೀರವಾದ ಉದ್ಘೋಷವು ಹುಟ್ಟುತ್ತದೆ ಎರಡು ಘನ

ಮೇಘಗಳು ತಾಕಲಾಡಿದವೆಂದರೆ, ದೀಪ್ತಿಮಂತವಾದ ಕೋಲ್ಮಿಂಚು
ಉದ್ಭವಿಸುತ್ತದೆ ಹಾಗೆಯೇ ಇಬ್ಬರು ವಿಕ್ರಮಶಾಲಿಗಳಾದ ರಣಪರಾಕ್ರ
ಮಿಗಳ ಸೈನ್ಯಗಳ ಘನಘೋರವಾದ ಸಂಗ್ರಾಮವಾಯಿತೆಂದರೆ, ದೇಶದಲ್ಲಿ
ವಿಲಕ್ಷಣವಾದ ಕ್ರಾಂತಿಯುಂಟಾಗಿ ಇತಿಹಾಸವು ಹೊಸದೊಂದು ಹಾದಿ
ಯನ್ನು ಹಿಡಿದು, ಅದ್ಭುತವಾದ ಪರಿಣಾಮವನ್ನುಂಟು ಮಾಡುತ್ತದೆ
ಸುಮಾರು ೧೩೦೦ ವರುಷಗಳ ಹಿಂದೆ ಹಿಂದುಸ್ಥಾನದಲ್ಲಿ ಇಬ್ಬರು ಬಲಾಢ್ಯ
ಚಕ್ರವರ್ತಿಗಳ ನಡುವೆ ಕಡುತರವಾದ ಕಾಳಗವೆಸಗಿ ನಮ್ಮ ಕರ್ನಾಟ
ಕದ ಇತಿಹಾಸದಲ್ಲಿ ಕಲ್ಪನಾತೀತವಾದ ಕ್ರಾಂತಿಯುಂಟಾಯಿತು.
ಕರ್ನಾಟಕದ ವೈಭವವು ಪ್ರಜ್ವಲಿಸಿತು ಅದರ ಸ್ಫೂರ್ತಿಯಿಂದಲೇ-ಅದರ
ಬೆಳಕಿನಿಂದಲೇ ಮುಂದೆ ಎಷ್ಟೋ ಶತಮಾನಗಳವರೆಗೆ ಕರ್ನಾಟಕವು
ಬಹು ಸಂಭ್ರಮದಿಂದ ಮೆರಯಿತು ಆ ಮಹಾಯುದ್ಧವೆಂದರೆ ಅಖಂಡ
ಉತ್ತರ ಹಿಂದುಸ್ಥಾನದ ಸಾರ್ವಭೌಮನಾದ ಶಿಲಾದಿತ್ಯಹರ್ಷವರ್ಧನ
ನಿಗೂ ಅಖಿಲ ದಕ್ಷಿಣಾಪಥದ ಚಕ್ರೇಶ್ವರನಾದ ಎರಡನೆಯ ಪುಲಿಕೇಶಿಗೂ
ನರ್ಮದಾ ನದಿಯ ದಡದಲ್ಲಾದ ಭಯಂಕರವಾದ ಕಾಳಗ ಅದರಲ್ಲಿ
ಶ್ರೀ ಪುಲಿಕೇಶಿಯು ಹರ್ಷವರ್ಧನನನ್ನು ಪೂರ್ಣವಾಗಿ ಸೋಲಿಸಿ ಹಿಮ್ಮೆ
ಟ್ಟಿದುದರಿಂದ, ಕರ್ನಾಟಕವು ಮುಂದೆ ಅನೇಕ ಶತಮಾನಗಳವರೆಗೆ
ಪ್ರತಿಕಕ್ಷೆಯಿಲ್ಲದ ಅದ್ವಿತೀಯ ಸಾಮ್ರಾಜ್ಯವಾಗಿ ಉಳಿಯಿತು

ಆದರೆ, ಈ ಪ್ರಚಂಡಕದನಕೋಲಾಹಲವಾಗುವ ಮುಂಚೆಯೇ
ಪುಲಿಕೇಶಿಯು ರಣರಂಗಭೀಷಣನೆಂದು ಹೆಸರುವಾಸಿಯಾಗಿದ್ದನು ಆತನ
ಆಯುಷ್ಯವೆಲ್ಲವೂ ವೈರಿಗಳನ್ನು ಗೆಲ್ಲುವುದರಲ್ಲಿಯೂ ಇದ್ದರಾಜ್ಯಗಳನ್ನು
ಕಾಯ್ದುಕೊಳ್ಳುವುದರಲ್ಲಿಯೂ ಹೊಸ ರಾಜ್ಯಗಳನ್ನು ಸಂಪಾದಿಸುವುದ
ರಲ್ಲಿಯೂ ಕಳೆದು ಹೋಗಿತ್ತು ಆತನು ಅತ್ಯಂತ ಪ್ರಬಲನಾದ ವೀರಾ
ಗ್ರಣಿಯಾದುದರಿಂದ, ಆತನು ತನ್ನ ಅರಿಗಳೆಲ್ಲರನ್ನೂ ಸದೆಬಡಿದು
ಅಪ್ರತಿಮ ಸಾರ್ವಭೌಮನಾಗಿ ಶೋಭಿಸಿದನು ತಂದೆಯಾದ ಕೀರ್ತಿ
ವರ್ಮನು ತೀರಿದಾಗ ಪುಲಿಕೇಶಿಯು ಚಿಕ್ಕಬಾಲಕನು ಆತನ ಚಿಗಪ್ಪ
ನಾದ ಮಂಗಳೇಶನು ರಾಜ್ಯಕಾರಭಾರವನ್ನು ನೋಡತೊಡಗಿದನು.

ಮಂಗಳೇಶನು ಶೂರನೂ ಧೀರನೂ ಆಗಿದ್ದರಿಂದ ಅವನು ತನ್ನನ್ನು ಬಾದಾಮಿಯ ಪಟ್ಟದಿಂದ ಹಾರಿಸುವನೆಂದು ಪುಲಿಕೇಶಿಗೆ ಸಂದೇಹವುಂಟಾಯಿತು ಆಗ ಬಾಲಪುಲಿಕೇಶಿಯು ಸಾಮ್ರಾಜ್ಯದ ಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳಲು ನಿಶ್ಚಯಿಸಿದನು ಆದರೆ, ಪುಲಿಕೇಶಿಯು ಬಾದಾಮಿಯಲ್ಲಿದ್ದು, ಇದನ್ನು ಸಾಧಿಸುವುದು ಶಕ್ಯವಿದ್ದಿಲ್ಲ ಆದುದರಿಂದ, ಆತನು ತನ್ನ ಬೆಂಬಲಿಗರೊಡನೆ ಬಾದಾಮಿಯನ್ನು ಬಿಟ್ಟು ಹೊರಟನು ಆ ರಣವಿಕ್ರಮನು ರಾಜ್ಯದಲ್ಲೆಲ್ಲ ಸುತ್ತಾಡಿ, ಪ್ರಜೆಗಳನ್ನೂ ಮಾಂಡಲಿಕ ಅರಸರನ್ನೂ ತನ್ನ ಕಡೆಗೆ ಒಲಿಸಿಕೊಂಡನು ಆತನು ಇನ್ನೂ ಕುಮಾರನೇ ಇದ್ದರೂ ಆ ಸುಕುಮಾರತೆಯಲ್ಲಿಯೇ ಬೀರವೂ ಜಾಣ್ಮೆಯೂ ಅಡಕವಾಗಿದ್ದುವು ತನ್ನ ಗೃಹಕಲಹವದ ಕಾಳ್ಗಿಚ್ಚಿನ ಕನ್ನು ಕೊಯ್ಯಗೊಡದಿದ್ದರೆ, ಚಾಳುಕ್ಯ ಮನೆತನಕ್ಕೆ ಅಳಿಗಾಲವೊದಗಬಹುದೆಂದೆಣಿಸಿ, ಆತನು ತನ್ನ ಚಿಗಪ್ಪನಾದ ಮಂಗಳೇಶನನ್ನು ಕಾರಭಾರದಿಂದ ಕಿತ್ತೊಗೆದು, ಸಿಂಹಾಸನವನ್ನಾಕ್ರಮಿಸುವ ಉದ್ದೇಶದಿಂದ ಪ್ರಬಲ ಸೈನ್ಯದೊಂದಿಗೆ ಆತನನ್ನು ಇದಿರಾದನು ಮಂಗಳೇಶನೂ ಮಾರ್ಕೊಂಡು ಬಂದು ಪುಲಿಕೇಶಿಯನ್ನು ತಾಗಿದನು ಉಭಯದಳಗಳ ನಡುವೆ ಭೀಷಣವಾದ ಕಾಳೆಗವೆಸಗಿ ಪುಲಿಕೇಶಿಗೆ ಜಯದೊರೆಯಿತು ಮಂಗಳೇಶನು ಹತನಾದನು ಕೂಡಲೆ, ಪುಲಿಕೇಶಿಯು ಸಿಂಹಾಸನಾರೂಢನಾದನು

ಪುಲಿಕೇಶಿಯು ಅರಸನಾದೊಡನೆ, ಅನೇಕ ಮಾಂಡಲಿಕರು ಚಾಳುಕ್ಯರ ನೊಗವನ್ನು ಚಿಮ್ಮಿ ಒಗೆಯಲು, ತಮಗೆ ಅದು ಉತ್ಕೃಷ್ಟವಾದ ಸಂಧಿಯೆಂದು ತಿಳಿದು, ಪುಲಿಕೇಶಿಯ ವಿರುದ್ಧವಾಗಿ ಬಂಡನ್ನೆಬ್ಬಿಸಿದರು ಚಾಲುಕ್ಯರ ಇಡೀ ಸಾಮ್ರಾಜ್ಯವೇ ಪ್ರಬಲರಿಪುಗಳ ನಳಲಿನಿಂದ ಮುಚ್ಚಿ ಕತ್ತಲೆಗವಿದುಹೋಗಿತ್ತು ಅಂತಹ ಇಡುಕಿನಲ್ಲಿ ಪುಲಿಕೇಶಿಯು ತಿಲಪ್ರಾಯವೂ ಅಂಜದೆ ಅಳುಕದೆ, ಏಕಾಂಗವೀರನಾಗಿ ತನ್ನ ಸೈನ್ಯದೊಂದಿಗೆ ವಿಸ್ತಾರವಾದ ರಾಜ್ಯದಲ್ಲೆಲ್ಲ ಚಕ್ರಾಕಾರವಾಗಿ

ಧೂಮಕೇತುವಿನಂತೆ ಪರಿಭ್ರಮಿಸಿ, ಚಾಳುಕ್ಯ ಸಾಮ್ರಾಜ್ಯವನ್ನು ನುಂಗಲು ಚಾಚಿದ ಮಾಂಡಲಿಕರ ತಲೆಗಳನ್ನು ನೀಳವಾದ ಖಡ್ಗಧಾರೆಯಿಂದ ತರಿದೊಗೆದು, ಅವರನ್ನು ತನ್ನ ಅಂಕಿತದಲ್ಲಿ ಇಟ್ಟುಕೊಳ್ಳುತ್ತ ಹೊರಟನು ಇಂದು ಉತ್ತರದಲ್ಲಿದ್ದರ ನಾಳೆ ದಕ್ಷಿಣದಲ್ಲಿ, ನಾಡದು ಪಶ್ಚಿಮದಲ್ಲಿ, ಆಚೆಯ ನಾಡದು ಪೂರ್ವದಲ್ಲಿ-ಹೀಗೆ ಕ್ಷಣಾರ್ಧದಲ್ಲಿ ತನ್ನ ಮಹಾ ಸೈನ್ಯವನ್ನು ಇತ್ತಿಂದತ್ತ ಅತ್ತಿಂದಿತ್ತ ತ್ವರೆಯಿಂದ ತಗೆದುಕೊಂಡು ಹೋಗಿ, ಎಚ್ಚತ್ತು ಏರಿಬರಲು ಆ ಮಾಂಡಲಿಕರಿಗೆ ಅವಕಾಶ ಕೊಡದೆ ಒಬ್ಬೊಬ್ಬರನ್ನಾಗಿ ತಿವಿದು ಉರುಳಿಸಿದನು ಪಶ್ಚಿಮದಲ್ಲಿ ಕದಂಬರು ಕಾಲುಕದರಿ ಜಗಳ ತೆಗೆದರು ಅವರ ಕಾಲುಗಳನ್ನು ಮುರಿಯುವುದರೊಳಗಾಗಿ ಮೌರ್ಯರು ಮದೋನ್ಮತ್ತರಾಗಿ ಮೆರೆಯುತ್ತಿದ್ದರು ಅವರನ್ನು ದುರ್ಮುಖರನ್ನಾಗಿ ಮಾಡುವಷ್ಟರಲ್ಲಿ ಉತ್ತರದಲ್ಲಿ ಕೋಸಲರು ಎದುರಾಗಿ ನಿಂತು ಕೇಶವನ್ನಪ್ಪಳಿಸಿದರು ಅವರ ಕೇಶಪಾಶವನ್ನು ಹಿಡಿದು ಬಗ್ಗಿಸಿದನೋ ಇಲ್ಲವೊ ಅಷ್ಟರಲ್ಲಿ ಮಾಳವರು ಆತನ ಮೇಲ್ಬಿದ್ದು ತೋಳ್ವೊಯ್ದರು, ಅವರ ತೋಳುಗಳನ್ನು ನವರುವದೊಂದೇ ತಡ, ವೆಂಗಿಯ ಅರಸರು ಎದೆಗೊಂಡು ಮಾರಾಂತರು, ಅವರ ಎದೆ ಮೆಟ್ಟಿ ಪ್ರತಿಭಟರ ಪ್ರಲಯಕಾಲನಂತೊಪ್ಪಿದನು! ಆ ಪ್ರತಾಪ ಸೂರ್ಯನು ತನ್ನ ರಕ್ತಕರಗಳಿಂದ, ತನ್ನ ಐಶ್ವರ್ಯವನ್ನು ಕದಿಯಲು ಬಂದ ಚೇರರೆಂಬ ಚೋರರನ್ನು ಅಡಗಿಸಿದನು, ನಾಡನ್ನು ಮುತ್ತಿದ್ದ ಚೋಳರೆಂಬ ಕಗ್ಗತ್ತಲನ್ನು ಚದರಿಸಿದನು, ತನ್ನ ಕೀರ್ತಿವಧುವಿನ ಮೇಲೆ ಕೈ ಮಾಡುವ ಕೇರಳರೆಂಬ ಜಾರರನ್ನು ಓಡಿಸಿದನು ಹೀಗ ಕೆಲವೊಂದು ಸಾರಿ ಹೆಬ್ಬುಲಿಯಂತೆ ಹಾರಿ ಹಾರಿಯೂ ಕೆಲವೊಂದು ಸಾರಿ ಪುಟ ಚೆಂಡಿನಂತೆ ನಗನಗೆಯೂ ಬಂಡುಗಾರರಾದ ಮಾಂಡಲಿಕರನ್ನು ಒಂದೆಡೆಗೆ ಸೇರಗೊಡದ ಅಲ್ಲಲ್ಲಿಯೇ ಅವರವರ ಶಕ್ತಿಯನ್ನು ಮುರಿಬಡಿದನು ಆತನ ತಂದೆ ಚಿಗಪ್ಪ ಮುತ್ತಜ್ಜರೇ ಮೊದಲಾದವರು ಮುಂಚೆ ಗೆದ್ದುಕೊಂಡ ನಾಡುಗಳೆಲ್ಲವನ್ನೂ ಪುನಃ ಈತನು ಗೆಲ್ಲಬೇಕಾಯಿತು ಸಾಮ್ರಾಜ್ಯವು ದೊಡ್ಡದಿದ್ದಷ್ಟು ಅದನ್ನು ಸಂರಕ್ಷಿಸುವ ಭಾರವೂ ದೊಡ್ಡದು ಸಮ್ರಾಟ್‌ಪುತ್ರನಾದವನೂ ಪುಲಿಕೇಶಿಯು ಹೀಗೆ ಅದೃಷ್ಟ ವಶದಿಂದ

ವಿಪಚ್ಚಕ್ರದ ಆವೇಗದಲ್ಲಿ ಸಿಲುಕಿ ನವೆಯಬೇಕಾಯಿತು. ಆತನು ತನ್ನ ಧೈರ್ಯೋತ್ಸಾಹ ವಿಕ್ರಮಗಳಿಂದ ಆ ವಿಪತ್ಪರಂಪರಗಳೆಲ್ಲವನ್ನೂ ಚದರಿಸಿ, ಹಿರಿಯರು ಸಂಪಾದಿಸಿದ ರಾಷ್ಟ್ರವೆಲ್ಲವನ್ನೂ ಗಟ್ಟಿಪಡಿಸಿ ಹಲವು ಹೊಸ ರಾಜ್ಯಗಳನ್ನು ಪಾದಾಕ್ರಾಂತವನ್ನಾಗಿ ಮಾಡಿಕೊಂಡು ತನ್ನ ಸಾರ್ವಭೌಮತ್ವವನ್ನು ಸ್ಥಿರಪಡಿಸಿದನು.

ಈ ಸತ್ಯಾಶ್ರಯ ಪುಲಿಕೇಶಿಯ ಕಾಲವು ಹಿಂದುಸ್ಥಾನದ ಇತಿಹಾಸದಲ್ಲಿ ಒಳ್ಳೇ ಮಹತ್ವದ ಕಾಲವು. ಆಗ, ಹಿಂದುಸ್ಥಾನವನ್ನು ಮೂವರು ಅತ್ಯಂತ ಪರಾಕ್ರಮಿಗಳು ಆಳುತ್ತಿದ್ದರು. ಇಡೀ ಉತ್ತರ ಹಿಂದುಸ್ಥಾನವನ್ನು ಹರ್ಷವರ್ಧನನು ಆಳುತ್ತಿದ್ದನು. ನರ್ಮದೆಯಿಂದ ಕೆಳಗಿರುವ ಇಡೀ ದಕ್ಷಿಣಾಪಥವನ್ನು ಈ ಪುಲಿಕೇಶಿಯು ಆಳುತ್ತಿದ್ದನು. ಕರ್ನಾಟಕದ ಕೆಳಗೆ ಪಲ್ಲವರ ಅತ್ಯಂತ ಪ್ರಬಲ ಅರಸನಾದ ನರಸಿಂಹವರ್ಮನು ಆಳುತ್ತಿದ್ದನು. ಮೂವರೂ ಶ್ಲಾಘ್ಯ ಚಕ್ರವರ್ತಿಗಳೇ. ಪುಲಿಕೇಶಿಗೆ ಅವರಿಬ್ಬರೊಡನೆಯೂ ಕಾದಬೇಕಾಯಿತು. ಉತ್ತರದಲ್ಲಿ, ಪುಲಿಕೇಶಿಯು ಹರ್ಷವರ್ಧನನನ್ನು ಸೋಲಿಸಿ, ಕೊನೆಯವರೆಗೆ ಆತನು ತನ್ನ ರಾಜ್ಯದಲ್ಲಿ ಕಾಲಿಡದಂತೆ ಮಾಡಿದನು. ದಕ್ಷಿಣದಲ್ಲಿ ಆತನು ಪಲ್ಲವರನ್ನು ಸೋಲಿಸಿ, ಕರ್ನಾಟಕದ ಮೇರೆಯನ್ನು ಭದ್ರಪಡಿಸಿದನು. ಈ ಪಲ್ಲವರಿಗೂ ಚಾಲುಕ್ಯರಿಗೂ ಮಾತ್ರ ಮುಂದೆ ಸಹ ಮೇಲಿಂದ ಮೇಲೆ ಕದನಗಳು ಆಗುತ್ತಲೇ ಇದ್ದುವು. ಪಲ್ಲವರಿಗೂ ಚಾಲುಕ್ಯರಿಗೂ ಇಷ್ಟು ತೀಕ್ಷ್ಣ ಹಗೆತನ ಉಂಟಾಗುವುದಕ್ಕೆ ಒಂದು ವಿಶೇಷ ಕಾರಣವು ಸಂಭವಿಸಿತ್ತು. ಪಲ್ಲವ ಅರಸನಾದ ತ್ರಿಲೋಚನ ಪಲ್ಲವನು ಪುಲಿಕೇಶಿಯ ಪೂರ್ವಜನಾದ ಜಯಸಿಂಹನನ್ನು ಯುದ್ಧದಲ್ಲಿ ಕೊಂದಿದ್ದನು. ಆಗ ಜಯಸಿಂಹನ ಹೆಂಡತಿ ಗರ್ಭಿಣಿಯಾದ ಹೆಂಗುಸು. ಅವಳು ದೇಶಭ್ರಷ್ಟೆಯಾಗಿ ಹೇಳಲಳವಲ್ಲದ ದುಃಖವನ್ನು ಅನುಭವಿಸಬೇಕಾಯಿತು! ಅವಳು ಅಡವಡವಿ ತಿರುಗಿ ಕೊನೆಗೆ ವಿಷ್ಣುಗೋಪನೆಂಬೊಬ್ಬ ಬ್ರಾಹ್ಮಣನನ್ನು ಆಶ್ರಯಿಸಿ ರಾಜಸಿಂಹನೆಂಬ ಮಗುವನ್ನು ಹೆತ್ತಳು. ಆ ರಾಜಸಿಂಹನ ಮಗನೇ ಚಾಲುಕ್ಯ ಸಾಮ್ರಾಜ್ಯದ ಪ್ರತಿಷ್ಠಾಪಕನಾದ ಒಂದನೆಯ ಪುಲಿಕೇಶಿ,

ಎಂದರೆ ಈ ಪುಲಿಕೇಶಿಯ ಅಜ್ಜ ತಮ್ಮ ಪೂರ್ವಜರಿಗುಂಟಾದ ಆ ವನವಾಸ ದುಃಖವು ಚಾಲುಕ್ಯಭೂಪರ ಮನದಲ್ಲಿ ಯಾವಾಗಲೂ ಶಲ್ಯದಂತೆ ಚುಚ್ಚುತ್ತಿತ್ತು! ಪಲ್ಲವರ ಹೆಸರನ್ನು ತೆಗೆದುಕೊಂಡನೆಯೆ, ಅವರು ನಿಗಿನಿಗಿ ಕೆಂಡವಾಗುತ್ತಿದ್ದರು. ಆದಕಾರಣವೇ ಪಲ್ಲವರ ಮೇಲ್ಲ ಪುಲಿಕೇಶಿಗೆ ಇಷ್ಟೊಂದು ಹಗೆತನ. ಪುಲಿಕೇಶಿಯು ಮಹಾಸೈನ್ಯದೊಂದಿಗೆ ಹೋಗಿ ಮಹೇಂದ್ರವರ್ಮನನ್ನು (ನರಸಿಂಹವರ್ಮನ ತಂದೆ) ತಾಗಿದನು. ಮಹೇಂದ್ರನೂ ಇದಿರಾಂತು ಪರಬಲವನ್ನು ಹೊಕ್ಕು ಲಗ್ಗೆಯಾಡಿದನು. ಆದರೆ, ಕಾಲಭೈರವನ ಹಣೆಗಣ್ಣಿನಂತೆ ಕಿಚ್ಚಿಡುವ ಪುಲಿಕೇಶಿಯ ತರವಾರಿಯ ಧಾರೆಯಿಂದ ಪಲ್ಲವೇಂದ್ರನ ಕೆಚ್ಚೆದೆ ಬಾಡಿಹೋಯಿತು, ಆತನು ಪೂರಾ ಸೋತನು. ಪುಲಿಕೇಶಿಯು ಪಲ್ಲವರಾಜಧಾನಿಯಾದ ಕಂಚೀಪಟ್ಟಣವನ್ನು ಹೊಕ್ಕು, ಕೊಳ್ಳೆಯಿಟ್ಟು ಸೂರೆಮಾಡಿದನು! ಮೊದಲುಂಟಾದ ಒಂದು ಅನವಮಾನದಿಂದ ಹೊತ್ತಿದ ಮುನಿಸುಗಿಚ್ಚಿನ ಉಲ್ಬಣವು ಮುಂದೆ ನೂರಾರು ವರುಷ ಆರದಷ್ಟು ಉಜ್ವಲವಾಗಿತ್ತು! ಅದರ ಮೂಲಕ ಹೊತ್ತು ಸಿಕ್ಕಾಗೆಲ್ಲ ಚಾಳುಕ್ಯರು ಕಂಚಿಯನ್ನು ನೆಳೆವುದೂ ಸುಡುವುದೂ, ಪಲ್ಲವರು ಬಾದಾಮಿಯನ್ನು ಸುಲಿವುದೂ ಸೂರೆಗೊಳ್ಳುವುದೂ ಒಂದೇ ಸವನ ನಡೆದಿದ್ದಿತು ಇರಲಿ.

ಪುಲಿಕೇಶಿಯು ರಣವಿಕ್ರಾಂತನಾಗಿದ್ದುದಲ್ಲದೆ ಧೀರೋದಾತ್ತನಾದ ಪುರುಷನೂ ಪ್ರಜಾರಂಜಕನೂ ಆಗಿದ್ದುದರಿಂದ ಮಾಂಡಲಿಕರ ಮತ್ತು ಪ್ರಜೆಗಳ ಪ್ರೇಮವನ್ನು ಸಂಪಾದಿಸಿ ಪಡುವಣಗಡಲ ಒಡೆಯನಾಗಿಯೂ, ಮೂಡಣ ಬಡಗಣ ತೆಂಕಣನಾಡುಗಳ ಏಕಾಧಿಪತಿಯಾಗಿಯೂ ರಾಜ್ಯವನ್ನಾಳಿ, ಕರ್ನಾಟಕದ ಕೀರ್ತಿಯನ್ನು ದಿಗಂತದಲ್ಲಿ ಹಬ್ಬಿಸಿದನು. ಆದರೆ ವೈಭವವು ಹೆಚ್ಚಿಗಿದ್ದಷ್ಟು ಅದರ ಮತ್ಸರಜನಕಶಕ್ತಿಯೂ ಹೆಚ್ಚು. ಬಡವನನ್ನು ಕಂಡು ಯಾವನು ಹೊಟ್ಟೆಕಿಚ್ಚು ಪಡುವನು? ಆದೇ, ಶ್ರೀಮಂತನನ್ನು ಮತ್ಸರಿಸುವವರು ಬಹಳ ಮಂದಿ. ಪುಲಿಕೇಶಿಯು ಸಮುದ್ರವಲಯಾಂಕಿತ ಪೃಥ್ವಿಯ ಅದ್ವಿತೀಯ ಸಮ್ರಾಟನಾದುದರಿಂದಲೇ ಉತ್ತರ ಹಿಂದುಸ್ಥಾನದಲ್ಲಿರುವ ಶಿಲಾದಿತ್ಯ ಹರ್ಷವರ್ಧನನ

ಮತ್ಸರವಷ್ಟಿಗೆ ಚಂಡಮಾರುತನು ನೂಂಕಿದಂತಾಯಿತು ಕನೋಜದ ಹರ್ಷವರ್ಧನನು ಅತುಲಸಾಹಸಿಯಾದ ಅಖಂಡ ಉತ್ತರ ಹಿಂದುಸ್ಥಾನದ ಚಕ್ರವರ್ತಿ ಪುಲಿಕೇಶಿಯಂತೆಯೇ ಸಮರಪರಶುರಾಮನಾದ ಆತನು, ಸಕಲ ನರಪತಿಗಳನ್ನು ಕಾಲಿಂದ ಮೆಟ್ಟಿ, ಆಡಂಬರದಿಂದ ಕಳಿಯ ಮೇಲಂ ಬಾರಿನಲ್ಲಿ ಮೆರಯುತ್ತಿದ್ದನು ಪುಲಿಕೇಶಿಯ ಕೀರ್ತಿಭೇರೀ ನಾದವನ್ನು ಆತನು ಸೈರಿಸದಾದನು ಪುಲಿಕೇಶಿಯನ್ನು ಪಾತಾಳಕ್ಕೊತ್ತಿ ಇಡೀ ಭರತಖಂಡದ ಏಕಚಕ್ರಾಧಿಪತಿಯೆನಿಸಲು ಆತನು ಹವಣಿಸಿದನು ಪುಲಿಕೇಶಿಯು ಆಹವ ಭಯಂಕರನೆಂಬುದು ಆತನಿಗೆ ಗೊತ್ತಿದ್ದುದರಿಂದ ಆತನು ತನ್ನ ರಾಜ್ಯದೊಳಗಿನ ಅಪ್ರತಿಮ ಭಟರೆಲ್ಲರನ್ನು ಕಲಹಾಕಿದನು, ತಡಿಯೊಡೆದ ಪ್ರಕ್ಷುಬ್ಧ ಮಹೋದಧಿಯಂತೆಯೂ, ಪ್ರಳಯ ಕಾಲದ ಮೇಘ ಸಂಘಾತದಂತೆಯೂ ರಣೋತ್ಸಾಹದಿಂದ ಗರ್ಜಿಸುವ ಅಸಂಖ್ಯಾತ ಸೈನ್ಯದೊಂದಿಗೆ ಆತನು ಪುಲಿಕೇಶಿಯನ್ನು ಕೊಚ್ಚಿಕೊಂಡು ಹೋಗ ಬೇಕೆಂದು ಉತ್ತರದಿಂದ ಒತ್ತಿಬಂದನು ಮಹಾರಾಜಾಧಿರಾಜನಾದ ಪುಲಿಕೇಶಿಯೂ ತನ್ನ ಕೆಚ್ಚಾಳುಗಳೆಲ್ಲರನ್ನೂ ಏಕೀಕರಿಸಿ ಸಾಗಿ ಅಚಲವೂ ಅಭೇದ್ಯವೂ ವಿಸ್ತೀರ್ಣವೂ ಆದ ಬಲಪರ್ವತಶ್ರೇಣಿಯನ್ನು ಅಡ್ಡವಾಗಿಟ್ಟು ಆ ಮಹಾಸೇನಾ ಸಾಗರವನ್ನು ತಡೆದನು ಎರಡು ಪಕ್ಷಗಳೂ ನರ್ಮದಾ ನದಿಯ ದಂಡೆಯ ಮೇಲ ತಾಕಲಾಡಿದವು, ಘೋರ ಸಂಗ್ರಾಮ ವಾಯಿತು ಅದರಲ್ಲಿ ಪುಲಿಕೇಶಿಯು ಮಾರಿಯ ಕೆನ್ನಾಲಿಗೆಯಂತಿರುವ ತನ್ನ ಕರವಾಳವನ್ನೆತ್ತಿ ಪಟುಭಟರ ತೋಳುಗಳನ್ನು ತುಂಡರಿಸಿದನು. ಹರ್ಷವರ್ಧನನು ಹರ್ಷೋತ್ಸಾಹಗಳನ್ನು ತುತ್ತಿ, ಧ್ವಜವನ್ನು ಕಿತ್ತಿ ವಿಜಯಶ್ರೀಯ ಮನಮೆಚ್ಚಿಸಿದನು ಈದ ಹುಲಿಯನ್ನು ಕೆಣಕಿ ಕೆಟ್ಟೆ ನೆಂದು ಹರ್ಷವರ್ಧನನು ಕಂಗೆಟ್ಟು ಕಾಲ್ದೆಗೆದನು ಮರಳಿ ದಕ್ಷಿಣದ ಕಡೆಗೆ ಇಣಿಕಿ ಕೂಡ ನೋಡಲಿಲ್ಲ ಈ ಗೆಲುವಿನ ಮೂಲಕವೇ ಕರ್ನಾಟಕವು ಸಮ್ರಾಟ್ ಪದವಿಯನ್ನೇರಿತು! ಕರ್ನಾಟಕ ಸಾಮ್ರಾಜ್ಯ ಲಕ್ಷ್ಮಿಯು ಹರ್ಷಜಲರಾಶಿಯಲ್ಲಿ ಓಲಾಡಿ ನಲಿದಾಡಿದಳು! ಪರಮ ಭಟ್ಟಾರಕನಾದ ಪುಲಿಕೇಶಿಯ ಈ ಮಹಾಯುದ್ಧದ ವಿಜಯದಿಂದ ಕನ್ನಡಿಗರಲ್ಲಿ ಹುಟ್ಟಿದ ಸ್ಫೂರ್ತಿಯು ಅನೇಕ ವೀರಾಧಿವೀರರಿಗೆ ಜನ್ಮ

ಕೊಟ್ಟು ಅವರಿಂದ ಭೂಪರಿಪಾಲನೆಯನ್ನೂ ಧರ್ಮದ ಸಂರಕ್ಷಣೆಯನ್ನೂ ಮಾಡಿಸಿ ಸಾವಿರಾರು ವರ್ಷಗಳವರೆಗೆ ಕರ್ನಾಟಕದ ಕೀರ್ತಿಕೇತುವನ್ನು ಎತ್ತಿಹಿಡಿಯಿತು. ಇದಕ್ಕೆ ವಿರುದ್ಧವಾಗಿ, ಅಪರಿಮಿತಸಾಮಂತ ಸಂಪೂಜ್ಯನಾಗಿದ್ದ ಹರ್ಷವರ್ಧನನು ಈ ಸೋಲಿನಿಂದ ಭಯವಿಗಲಿತಹರ್ಷನಾಗಿ ಕೊನೆಯವರೆಗೆ ಮೋರೆ ಎತ್ತಲಿಲ್ಲ. ಆತನ ತರುವಾಯ ಕೂಡ ಉತ್ತರ ಹಿಂದುಸ್ಥಾನವಲ್ಲವೂ ನಿರ್ವೀರ್ಯವಾಯಿತು. ಹರ್ಷವರ್ಧನನೇ ಉತ್ತರ ಹಿಂದುಸ್ಥಾನದ ಕಟ್ಟಕೊನೆಯ ಬಲಾಢ್ಯ ಚಕ್ರವರ್ತಿ!

ನಿಜಭುಜ ಪ್ರತಾಪದಿಂದ ಹೀಗೆ ಪೃಥ್ವೀವಲ್ಲಭನಾದ ಪುಲಿಕೇಶಿಯ ಈ ಜಯಘೋಷವು ಇರಾಣದವರೆಗೆ ಹೋಗಿ ತಲುಪಿತು. ೨ನೆಯ ಖುಸ್ರು ಎಂಬವನು ಆಗ ಇರಾಣದ ರಾಜನಾಗಿದ್ದನು. ಇಟಲಿಯ ರೋಮನ್ನಜನರು ಇರಾಣವನ್ನು ನುಗ್ಗಿ ಊರುಗಳನ್ನು ಕೊಳ್ಳೆ ಹೊಡೆಯುತ್ತಿದ್ದರು. ಆ ಸಮಯದಲ್ಲಿ ಪುಲಿಕೇಶಿಯ ಪ್ರತಾಪವನ್ನು ಕೇಳಿದ ಆತನು ಇವನ ಸಹಾಯವನ್ನು ಪಡೆಯಲು ಬಯಸಿ, ಕಾಣಿಕೆಯೊಂದಿಗೆ ಪುಲಿಕೇಶಿಯ ಕಡೆಗೆ ತನ್ನ ರಾಯಭಾರಿಯನ್ನು ಕಳುಹಿಸಿದನು. ಆದರೆ ನೆರವು ಕೊಡುವ ಪ್ರಸಂಗವು ಮುಂದೆ ಒದಗಿದಂತೆ ತೋರುವುದಿಲ್ಲ. ಇರಲಿ. ಚೀನಾದೇಶದ ಹ್ಯುವೆನ್‌ತ್ಸಾಂಗನೆಂಬ ಪ್ರವಾಸಿಯು ಪುಲಿಕೇಶಿಯ ಕಾಲದಲ್ಲಿ ಭರತಖಂಡಕ್ಕೆ ಬಂದಿದ್ದನು. ಆತನು ಸತ್ಯಾಶ್ರಯ ಪುಲಿಕೇಶಿಯ ಶೌರ್ಯೌದಾರ್ಯಗಳನ್ನೂ ಕನ್ನಡ ವೀರರ ಕಟ್ಟಾಳುತನವನ್ನೂ ಬಹಳ ಹೃದಯಂಗಮವಾಗಿ ವರ್ಣಿಸಿರುವನು.

ಪುಲಿಕೇಶಿಯು ಮಾಡಿದ ಯುದ್ಧಗಳನ್ನು ನೋಡಿದರೆ ನಟ್ಟನಡುವಿನ ರಾಜ್ಯದಲ್ಲಿ ಆತನಿಗೆ ಶತ್ರುಗಳಾರೂ ವಿಶೇಷವಾಗಿ ಇದ್ದಿಲ್ಲವೆಂದೂ ಚಾಳುಕ್ಯ ಚಕ್ರದ ಪರಿಘದ ಸುತ್ತಲೂ ಮಾತ್ರ ಆತನ ವಿರುದ್ಧವಾಗಿ ಅನೇಕ ಅರಸರು ತಲೆಯೆತ್ತಿದ್ದರೆಂದೂ ಕಂಡುಬರುವುದು. ಏಕೆಂದರೆ, ಆತನ ದಂಡಯಾತ್ರೆಯು ಪಶ್ಚಿಮದಲ್ಲಿ ಪ್ರಾರಂಭವಾಗಿ, ಮೇಲ್ಗಡೆಗೆ ಉತ್ತರಕ್ಕೆ ಸಾಗಿ, ಆ ಬಳಿಕ ಪೂರ್ವಕ್ಕೆ ಹೊರಳಿ, ದಕ್ಷಿಣಕ್ಕಿಳಿದು ಮುಗಿದಿರು

ತ್ತ್ರಪ ಪಶ್ಚಿಮದಲ್ಲಿ ಆತನು ಕದಂಬ ಗಂಗ ಅಲೂಪ ಮುಂತಾದವ ರನ್ನು ಗೆದ್ದಿರುವನು ಮೌರ್ಯರನ್ನು ಸೋಲಿಸಿ, ದೊಡ್ಡ ಹಡಗುಪಡೆ ಯೊಂದಿಗೆ ಉತ್ತರದಲ್ಲಿ "ಪುರಿ'' ಗೆ ಹೋಗಿರುವನು ಲಾಟ, ಮಾಳವ, ಗುರ್ಜರ, ಕೋಸಲ, ಕಳಿಂಗ, ವೆಂಗಿ, ಕಂಚಿ ಮುಂತಾದ ದೇಶಗಳಲ್ಲಿ ತನ್ನ ವಿಜಯಯಾತ್ರೆಯನ್ನು ಮುಗಿಸಿಕೊಂಡು, ತಮಿಳುರಾಜರುಗಳಾದ ಚೋಳ, ಚೇರ, ಪಾಂಡ್ಯ ಅರಸರನ್ನು ಗೆದ್ದು ತನ್ನ ಅದ್ಭುತವಾದ ವಿಜಯಯಾತ್ರೆ ಯನ್ನು ಕೊನಗಾಣಿಸಿರುವನು ಈ ವಿಜಯಯಾತ್ರೆಯನ್ನು ಪ್ರಾರಂಭಿ ಸುವದಕ್ಕೆ ಮುಂಚೆ ಮಧ್ಯರಾಜ್ಯದಲ್ಲಿ ಆತನಿಗೆ ಭೀಮಾನದಿಯ ಉತ್ತರಕ್ಕಿ ರುವ ಪ್ರದೇಶದಲ್ಲಿ ಆಪ್ಪಾಯಿಕ ಮತ್ತು ಗೋವಿಂದ ಎಂಬಿಬ್ಬ ಕಡುಗಲಿ ಗಳು ಮಾತ್ರ ಕೆಲವು ಕಾಲ ಆತನಿಗೆ ತೊಂದರೆಕೊಟ್ಟರು ಆವರೆ ಒಬ್ಬ ನನ್ನು ಸೋಲಿಸಿ, ಮತ್ತೊಬ್ಬನನ್ನು ಮಿತ್ರನನ್ನಾಗಿ ಮಾಡಿಕೊಂಡು, ಆ ಬಳಿಕ ಮೇಲೆ ಹೇಳಿದ ದಂಡಯಾತ್ರೆಗ ಹೊರಟನು ಶ್ರೀ ಪುಲಿ ಕೇಶಿಯು ಆಳುತ್ತಿದ್ದ ಈ ವಿಶಾಲವಾದ ರಾಷ್ಟ್ರವು ಮುಂದೆ ಬಹುಶಃ ಯಾವತ್ತು ಕರ್ನಾಟಕ ಸಮ್ರಾಟರ ರಾಷ್ಟ್ರವಾಗಿತ್ತು, ಎಂದರೆ, ಈಗಿನ ಮಹಾರಾಷ್ಟ್ರ ಮತ್ತು ಕರ್ನಾಟಕ ಇವೆರಡೂ ಪ್ರಾಂತಗಳು ಅನೇಕ ಶತ ಮಾನಗಳವರೆಗೆ ನಮ್ಮ ಕನ್ನಡಿಗ ಅರಸರ ಅಧೀನದಲ್ಲಿದ್ದುವು ಅವ ರಡೂ ಪ್ರಾಂತಗಳನ್ನೊಳಕೊಂಡ ಪ್ರದೇಶಕ್ಕೆ ಕರ್ನಾಟಕ ಸಾಮ್ರಾಜ್ಯದ ಕೆಚ್ಚೆಂದು ಕರೆಯಬಹುದು ಅನೇಕ ಶತಮಾನಗಳವರೆಗೆ ಮರಾಟಿಗರಿಗೆ ಪ್ರತ್ಯೇಕವಾದ ಅಸ್ತಿತ್ವವಿರಲಿಲ್ಲ ಪುಲಿಕೇಶಿಯ ತರುವಾಯ ಐದಾರು ನೂರು ವರ್ಷಗಳ ಮೇಲೆ, ದೇವಗಿರಿ ಯಾದವರ ಆಳಿಕೆಯ ಕೊನೆಯ ಕಾಲದಿಂದ ಮಾತ್ರ ಮಹಾರಾಷ್ಟ್ರವು ತನ್ನ ಪ್ರತ್ಯೇಕ ಅಸ್ತಿತ್ವವನ್ನು ಪಡೆದುಕೊಂಡಿತು ಇರಲಿ

ಈ ರೀತಿಯಾಗಿ, ಶ್ರೀ ಸತ್ಯಾಶ್ರಯ ಪುಲಿಕೇಶಿಯು ಮೊದಲು ಮನ ಜಗಳವನ್ನು ನಂದಿಸಿ, ಅಲ್ಲಿಂದ ಬಲಿತು ಮಲೆತು ನಿಂತ ಮಾಂಡಲಿಕ ವರ್ಗವನ್ನು ಮುರಿಬಡೆದು, ಆ ಬಳಿಕ ಅನೇಕ ಹೊಸ ರಾಜ್ಯಗಳನ್ನು ಗೆದ್ದುಕೊಂಡು, ರಭಸದಿಂದ ಮುನಿದೆತ್ತಿಬಂದ ಹರ್ಷವರ್ಧನನನ್ನು ತನ್ನ

ದೋರ್ಬಲದಿಂದ ಇರಿದಿಕ್ಕಿ, ಮನೆತನದ ಹುಟ್ಟುಹಗೆಗಳಾದ ಪಲ್ಲವರನ್ನು ಪಾತಾಳಕ್ಕೊತ್ತಿ ಎಲ್ಲರ ತಲೆಯಮೇಲೂ ತಾಂಡವನೃತ್ಯವಾಡಿ "ಪರಮೇಶ್ವರ'' ನೆಂದು ಬಿರುದು ಪಡೆದನು. ಚಾಳುಕ್ಯ ಚಕ್ರವರ್ತಿಯಾದ ಈ ಬಾದಾಮಿಯ ಶ್ರೀ ಸತ್ಯಾಶ್ರಯ ಪುಲಿಕೇಶಿಯು ಕರ್ನಾಟಕರನ್ನು ಸದಾ ಪುಲಕಿತಕೇಶರನ್ನಾಗಿ ಮಾಡಲಿಕ್ಕಿಲ್ಲವೆ?

---

# ಧುರಧೀರನಾದ

# ಧ್ರುವ

---

## (೭೮೪-೭೯೪)

ತಮ್ಮ ಜೀವನದ ಧ್ಯೇಯ ಸಾಧನೆಗೆ ಎಂತಹ ಎಡರುಗಳೊದಗಿದರೂ ಆ ಧ್ಯೇಯವನ್ನು ದೃಷ್ಟಿಯಿಂದ ಕದಲಗೊಡದ ಧ್ರುವನಕ್ಷತ್ರದಂತೆ ಅದನ್ನು ನಿಶ್ಚಲವಾಗಿಟ್ಟುಕೊಂಡು, ಅವ್ಯಾಹತವಾಗಿ ಸಾಗುವ ಧೀರೋದಾತ್ತರು ಈ ಜಗತ್ತಿನಲ್ಲಿ ತೀರ ಸ್ವಲ್ಪ ಮಂದಿ. ಅರಸರಲ್ಲಂತೂ ಈ ತರಹದ ಜನರು ಸಿಕ್ಕುವುದು ಮತ್ತಷ್ಟು ವಿರಳ. ಸ್ವಬಾಹುಸಾಮರ್ಥ್ಯದಿಂದ ರಾಜ್ಯವನ್ನು ಗಳಿಸಿದವರೆಲ್ಲರಲ್ಲಿಯೂ ಬಹುಶಃ ಈ ಬಗೆಯ ಸುಸ್ಥಿರ ದೃಷ್ಟಿ ಇದ್ದೇ ಇರುತ್ತದೆ. ಆದರೆ, ಅನಾಯಾಸವಾಗಿ ಕೈಗೆ ಬಂದ ಅರಸೊತ್ತಿಗೆಯನ್ನು ಅರೆಕ್ಷಣದಲ್ಲಿ ಹಾರಿಸಿಬಿಡುವ ಪ್ರಸ್ಯಾತ್ತ್ವದ ಮುಟ್ಟಿದರೆ, ಆ ಸಾಮ್ರಾಜ್ಯವು ಅಲ್ಪಾವಧಿಯಲ್ಲಿ ರಸಾತಳಕ್ಕಿಳಿಯುತ್ತದೆ. ಸಾಮ್ರಾಜ್ಯವನ್ನು ಕಟ್ಟುವುದಕ್ಕೆ ಪರಿಶ್ರಮಪಡಬೇಕಾದಂತೆ ಅದನ್ನು ಕಾಯ್ದುಕೊಳ್ಳುವುದಕ್ಕೂ ಪರಿಶ್ರಮಪಡಬೇಕಾಗುವುದು. ಹೊಸದಾಗಿ ನಿರ್ಮಿಸಿದ ಸಾಮ್ರಾಜ್ಯಕ್ಕೆ ಎಡರುಗಳು ಬರದೆ ಕೊನೆಗಳಿಗ ಕುತ್ತಗಳು ಬಿಟ್ಟಿಲ್ಲವೆ? ಸಾಮ್ರಾಜ್ಯವು ಏಕವಾಗಿದ್ದು ಬೇರೂರಿದು ನಿಲ್ಲದಿದ್ದಾಗ ಬಿರುಗಾಳಿಗಳ ಹೊಡೆತದಿಂದ ಅದು ಮೇಲಿಂದ ಮೇಲೆ ನಡುಗುತ್ತದೆ. ಆ ಸಂದರ್ಭದಲ್ಲಿ ಅದರ ಸಂರಕ್ಷಣೆಗೆ ಅತ್ಯಂತ ಧೂರ್ತ ಪುರುಷನು ಬೇಕಾಗುತ್ತಾನೆ. ಇಲ್ಲದಿದ್ದರೆ ಆ ಸಾಮ್ರಾಜ್ಯವು ಕುಸಿದು ಬೀಳುತ್ತದೆ. ಶ್ರೀ ಶಿವಾಜಿ ಮಹಾರಾಜನು ಮಹಾರಾಷ್ಟ್ರ ಸಾಮ್ರಾಜ್ಯವನ್ನು ಕಟ್ಟಲಿಕ್ಕೆ ಪಟ್ಟಷ್ಟು ಸಾಹಸವನ್ನು ಸಂಭಾಜಿಯು ಅದನ್ನು ಕಾಯ್ದುಕೊಳ್ಳುವುದರಲ್ಲಿ ತೋರಿಸಿದ್ದರೆ, ಮಹಾರಾಷ್ಟ್ರ ಸಾಮ್ರಾಜ್ಯವು ತನ್ನ ಜೀವನ ನಷ್ಟ ಹೊಂದ

ತ್ತಿರಲಿಲ್ಲ ೮ನೆಯ ಶತಮಾನದ ಕೊನೆಯಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯಕ್ಕೂ ಇದೇ ಬಗೆಯ ಆಪತ್ತು ಪ್ರಾಪ್ತವಾಯಿತು ಅಲ್ಲಿಯೂ ಸಂಭಾಜಿಯಂತಹ ಒಬ್ಬ ಅರಸು ಹುಟ್ಟಿ ಆ ಸಾಮ್ರಾಜ್ಯವನ್ನು ಸಡಿಲು ಮಾಡಿದ್ದನು ಆದರೆ ಕರ್ನಾಟಕದ ಸುದೈವದಿಂದ ಧ್ರುವನಂತಹ ಧೀರೋದಾತ್ತನು ಸರಕ್ಕನೆ ಮುಂದೆ ಬಂದು ಆತನನ್ನು ದಬ್ಬಿ, ಇಟ್ಟಣಿಸಿ ಆವರಿಸಿ ಬಂದ ರಿಪುಸಮೂಹವನ್ನು ಬೀಸತೊಯ್ದು ಸಾಮ್ರಾಜ್ಯವನ್ನು ಬದುಕಿಸಿದನು

೮ನೆಯ ಶತಮಾನದ ಮಧ್ಯದಲ್ಲಿ ಧ್ರುವನ ಮುತ್ತಜ್ಜನಾದ ಖಡ್ಗಾವಲೋಕನೆಂಬ ಬಿರುದುಳ್ಳ ದಂತಿವರ್ಮನು ತನ್ನ ಖಡ್ಗಸಂಗ್ರಾಮಚಾತುರ್ಯದ ಅಗ್ಗಳಿಕೆಯಿಂದ ಬಾದಾಮಿಯ ಚಾಲುಕ್ಯಕೀರ್ತಿವರ್ಮನನ್ನು ನೂಕಿ ರಾಷ್ಟ್ರಕೂಟ ಸಾಮ್ರಾಜ್ಯವನ್ನು ಪ್ರಸ್ಥಾಪಿಸಿದನು ಧ್ರುವನ ತಂದೆಯಾದ ಅಕಾಲವರ್ಷ ಕೃಷ್ಣನು ಕಡೆಗಾಲದ ವರ್ಷಾಕಾಲದಂತೆ ಕಣೆಗಳ ಮಳೆಯನ್ನು ಸುರಿಸಿ, ವಿರೋಧಿಗಳಿಗೆ ಅಕಾಲಮೃತ್ಯುವಾಗಿ ಸಾಮ್ರಾಜ್ಯವನ್ನು ಬೆಳೆಸಿ ಬಲಿಸಿದನು ಹೀಗೆ ಹೊಸದಾಗಿ ಸಾಮ್ರಾಜ್ಯವು ನಿರ್ಮಿತವಾಗಿ ೩೦ ವರ್ಷಗಳಾಗಿದ್ದವೂ ಇಲ್ಲವೂ ಅಷ್ಟರಲ್ಲಿ ಧ್ರುವನ ಅಣ್ಣನಾದ ಗೋವಿಂದನ ಅವಿವೇಕತನದಿಂದ ಅದಕ್ಕೆ ದೊಡ್ಡಗಂಡಾಂತರ ಒದಗಿತು ಗೋವಿಂದನು ಲೀಲಾವಿಲಾಸಿ, ಕಾಮಾಸಕ್ತನು, ಶೂರನಾದರೂ ವಿಷಯಲಂಪಟನು ಆದುದರಿಂದ ಆತನು ರಾಜ್ಯಭಾರವನ್ನು ದುರ್ಲಕ್ಷಿಸಿ ಜನರ ಅಪ್ರೀತಿಗೆ ಪಾತ್ರನಾದನು ಈ ಕಾರಣದಿಂದ ಗೋವಿಂದನ ತಮ್ಮನಾದ ಧ್ರುವನನ್ನು ಪಟ್ಟದಮೇಲೆ ಕುಳ್ಳಿರಿಸಬೇಕೆಂದು ಜನರು ಗೊತ್ತುಮಾಡಿದರು ಆದರೆ ಸಾಮ್ರಾಜ್ಯದೊಳಗಿನ ಪ್ರಜೆಗಳಿಗೆ ತಮ್ಮ ದೊರೆಯು ಗಟ್ಟಿಗನೂ ಒಳ್ಳೆಯವನೂ ಪ್ರಜಾರಂಜಕನೂ ಆದವನು ಬೇಕಾಗಿದ್ದರೆ, ನೆರೆಯ ರಾಯರಿಗೂ ಸಾಮಂತರಿಗೂ ಹೇಡಿಯೂ ಪ್ರಜಾಪೀಡಕನೂ ಬೇಕಾಗುತ್ತಾನೆ ಏಕೆಂದರೆ ಇಂಥ ಅರಸನ ಆಳಿಕೆಯಲ್ಲಿ ಅವರ ಬೇಳೆ ಚೆನ್ನಾಗಿ ಬೆಯ್ಯುತ್ತದೆ, ಮನಸ್ಸಿನೊಳಗಿನ ಮಂಡಿಗೆಗಳು ಪ್ರತ್ಯಕ್ಷವಾಗಿ ತಿನ್ನಲು ಸಿಕ್ಕುತ್ತವೆ ಆಗಿನ ಕಾಲದಲ್ಲಿ ಶಿವಮಾರನೆಂಬ

ವನು ದಕ್ಷಿಣದಲ್ಲಿ ಗಂಗರಾಜ್ಯದ ಅಧಿಪತಿಯಾಗಿದ್ದನು. ಆತನು ಅತ್ಯಂತ ಸಾಹಸಿಯೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಅರ್ಥಾತ್, ಗೋವಿಂದನಂತಹ ದುಂದುಗಾರನು ಭೂನಾಥನಾಗಿ, ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಹುಳುಹತ್ತಿದುದು ಆತನಿಗೆ ಒಳ್ಳೆ ಹಿತವಾಯಿತು. ಆದುದರಿಂದ ಶಿವಮಾರನು ಆತನ ಬೆನ್ನು ಕಚ್ಚಿದನು. ಇತ್ತ, ಧ್ರುವನು ಪ್ರಜಾನುರಾಗವನ್ನು ಸಂಪಾದಿಸಿ ರಾಜಧಾನಿಯಲ್ಲಿ ಬೇರೂರಿ ನಿಂತು ಕೊಂಡನು. ವ್ಯಕ್ತಿ ವಿಷಯದಲ್ಲಿ ಅಣ್ಣ ತಮ್ಮಂದಿರೊಳಗೆ ಜಗಳವಾಗುವುದು ಗೌಣವಾದರೂ ರಾಷ್ಟ್ರ ವಿಷಯದಲ್ಲಿ ಅದು ಗೌಣವಲ್ಲ. ಭೂಬುಜನು ಕೇವಲ ವ್ಯಕ್ತಿಯಲ್ಲ, ಪ್ರಜೆಗಳನ್ನು ಕಕುಲಾತಿಯಿಂದ ಕಾಪಾಡುವುದಕ್ಕೆ ನಿಯಮಿಸಲ್ಪಟ್ಟ ರಾಷ್ಟ್ರದ ಹೊಣೆಗಾರನಾದ ಅಧಿಕಾರಿ. ಆತನು ತನ್ನ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಬದಿಗಿಡಬೇಕು. ಹೀಗೆ ಬದಿಗಿಡುವವನೇ ನಿಜವಾದ ಭೂಪತಿ. ಶ್ರೀ ರಾಮಚಂದ್ರನು ಪ್ರಜೆಗಳ ಹಿತಕ್ಕೋಸ್ಕರ ಪ್ರಿಯ ಪತ್ನಿಯಾದ ಸೀತೆಯನ್ನು ಬಿಡಲು ಸಿದ್ಧನಿರಲಿಲ್ಲವೆ? ಕೌರವರನ್ನು ಅಣ್ಣತಮ್ಮಂದಿರೆಂದು ಕ್ಷಮಿಸದೆ, ಎದುರಿಸಿ ಬಂದವರು ಆಪ್ತರೇ ಇರಲಿ ಗುರುಗಳೇ ಇರಲಿ ಅವರೆಲ್ಲರನ್ನೂ ಕೊಲ್ಲುವುದೇ ಧರ್ಮವೆಂದು ಶ್ರೀ ಕೃಷ್ಣನು ಉಪದೇಶಿಸಲಿಲ್ಲವೆ? ಅದೇ ರೀತಿಯಾಗಿ ಗೋವಿಂದನು ತನ್ನ ಅಣ್ಣನೆಂಬುದನ್ನು ಲಕ್ಷಿಸದೆ ಆತನನ್ನು ಮೂಲೆಗೆ ಸರಿಸಿ ಧ್ರುವನು ಸಾರ್ವಭೌಮನಾದನು. ಗೋವಿಂದನು ರಾಜಧಾನಿಯನ್ನು ಬಿಟ್ಟುಕೊಟ್ಟು ಪಲಾಯನ ಸೂತ್ರವನ್ನು ಜಪಿಸಬೇಕಾಯಿತು. ಗಂಗನರೇಂದ್ರನಾದ ಶಿವಮಾರ ಸೈಗೊಟ್ಟನು ಗೋವಿಂದನನ್ನು ಮತ್ತೆ ಪಟ್ಟಕ್ಕೆ ಕುಳ್ಳಿರಿಸುವ ಉದ್ದೇಶದಿಂದ ಧ್ರುವನ ಮೇಲೆ ದಂಡೆತ್ತಿ ಸಾಗಿ ಬಂದನು. ಧ್ರುವನು ಮುನಿಸೆತ್ತಿ ಬಂದು ಮುತ್ತಿ ಕಾದಿದನು. ಭೀಕರವಾದ ಸಮರಕ್ಕೆ ಮೊದಲಾಯಿತು. ಧ್ರುವನು ನಿಸ್ಸೀಮ ಧೈರ್ಯದಿಂದ ಅರಿಕಟಕವನ್ನು ಭೇದಿಸಿ, ನುಗ್ಗಿ, ಮದಕರಿಯು ಕದಳೀವನವನ್ನು ಒಕ್ಕಲಿಕ್ಕಿ ತುಳಿವಂತೆ ಹಲವರನ್ನು ಕೊಂದೊರಗಿಸಿ ಹಲವರನ್ನು ಕವಳಿಸಿ ಕೆಡಹಿ ಹಲವರನ್ನು ಬಳಲಿಸಿ ದೆಸಗೆಡಿಸಿ ಸಮರಲೀಲಾವಿನೋದವನ್ನು ಗೈದನು. ಕೈಚಳಕದಿಂದ ವಿದ್ಯುದ್ಗತಿಯನ್ನು ಮಿಂಚಿಸಿ ಪರಸೇನಾರಣ್ಯದಲ್ಲಿ ನಾಲ್ಕೈ

ದು ಮೂರು ಅಗಲದ ರಾಜವೀಧಿಯನ್ನುಂಟುಮಾಡಿಕೊಂಡು ಮುಂದು ಮುಂದಕ್ಕೆ ಸಾಗಿ ಶಿವಮಾರನನ್ನು ತುಡುಕಿದನು, ಅವನ ಕೈದುವನ್ನು ಕಳಚಿದನು, ಬಿಂಕವನ್ನು ಇಳಿಸಿದನು, ಕಾಲಾಟವನ್ನು ಉಡುಗಿಸಿದನು; ಅವನನ್ನು ಕಟ್ಟಿತಂದು ಸೆರೆಯಲ್ಲಿಟ್ಟನು. ಗಂಗಾಧೀಶನಾದ ಶಿವಮಾರನಂತಹ ಅತಿಶೂರ ಪುರುಷನ ಅವಸ್ಥೆ ಹೀಗಾದುದರಿಂದ ಎಲ್ಲಾ ಕಡೆಯಲ್ಲಿಯೂ ಸ್ತಬ್ಧತೆಯುಂಟಾಯಿತು. ಧ್ರುವನ ಆಯುಷ್ಯದೊಳಗೆ ಮಾತ್ರವೇ ಅಲ್ಲ, ರಾಷ್ಟ್ರಕೂಟರ ಮತ್ತು ಗಂಗರ ಇತಿಹಾಸದಲ್ಲಿ ಈ ಕಾದಾಟವು ಬಹಳ ಪರಿಣಾಮಕಾರಕವಾದ ಸಂಗತಿಯಾಯಿತು. ಗಂಗರು ೫-೬ ನೂರು ವರ್ಷಗಳಿಂದ ವಿಜೃಂಭಣೆಯಿಂದ ಮೆರೆದಿದ್ದರು. ಇಂದಿನ ವರೆಗೆ ಅವರಿಗೆ ಸೋಲು ಬಂದಿರಲಿಲ್ಲ. ಅವರ ಭೂಕಾಂತನಾದವನೇ ಹೇಡಿ ಎನ್ನಬೇಕೆ? ಹಾಗೂ ಇಲ್ಲ. ಆತನು ಚತುರ, ಸಾಹಸಿ, ಧೀರ, ಅನ್ಯಾದೃಶನಾದವನು. ಅಂಥವನು ಸೋತುದು ಮಾತ್ರವೆ ಅಲ್ಲದೆ, ತನ್ನ ಬಂಧದಲ್ಲಿ ತೊಳಲಾಡುತ್ತಿರುವವನ್ನು ನೋಡಿ ರಾಷ್ಟ್ರಕೂಟರ ಸೈನ್ಯವು ಬೀಗಿತು. ಧ್ರುವನ ಮೇಲೆ ಅವರ ವಿಶ್ವಾಸ ಹೆಚ್ಚಿತು.

ಈ ಪ್ರಕಾರವಾಗಿ ಧ್ರುವನು ತನ್ನ ಸಾಮ್ರಾಜ್ಯವನ್ನು ಭದ್ರಪಡಿಸಿದ್ದರಿಂದ ಆತನ ಯಶಶ್ಚಂದ್ರಿಕೆಯು ಪರರಾಷ್ಟ್ರಗಳಲ್ಲಿ ಬೆಳಗಿತು. ಧ್ರುವನು ಜ್ಯೇಷ್ಠೋಲ್ಲಂಘನವನ್ನು ಮಾಡಿ, ಎಂದರೆ ತನ್ನ ಅಣ್ಣನನ್ನು ಗದ್ದುಗೆಯಿಂದ ಉರುಳಿಸಿ ತಾನು ಸಿಂಹಾಸನಾರೂಢನಾದುದರಿಂದ ಆತನು ಸ್ವಾರ್ಥಪರನೆಂದು ಮಾತ್ರ ತಿಳಿಯಕೂಡದು. ಕೇವಲ ದೇಶದ ಕಲ್ಯಾಣಕ್ಕೋಸ್ಕರ, ಪ್ರಜೆಗಳ ಸಮೃದ್ಧಿಯ ಸಲುವಾಗಿ ಆತನು ಹಾಗೆ ಮಾಡಿದನು. ಅವನು ನಿಃಸ್ವಾರ್ಥನಿದ್ದನೆಂಬುದರ ಪರೀಕ್ಷೆಯೂ ಮುಂದೆ ಬೇಗನೆ ಆಯಿತು. ರಣಾವಲೋಕ ಸ್ತಂಭ ಅಥವಾ ಕಂಭಯ್ಯ ಎಂಬವನು ಧ್ರುವನ ಹಿರಿಯ ಮಗನು. ಮುಮ್ಮಡಿ ಗೋವಿಂದ ಎಂಬವನು ಕಿರಿಯ ಮಗನು. ಕಿರಿಯ ಮಗನು ಅತೀವ ಬಲಾನ್ವಿತನೂ ಜನಹಿತದಕ್ಷನೂ ಇರುವನೆಂದು ತಿಳಿದುದರಿಂದ, ಧ್ರುವನು ಹಿರಿಯ ಮಗನನ್ನು ಪೀಠದಿಂದ ತಪ್ಪಿಸಿ ಚಿಕ್ಕವನಿಗೇ ಯೌವರಾಜ್ಯ ಪಟ್ಟವನ್ನು ಕಟ್ಟಿದನು.

ಅಷ್ಟೇ ಅಲ್ಲ, ತಾನು ಕೂಡ ಹಿಂದೆ ಸರಿದು ಆತನನ್ನೇ ಸಾಮ್ರಾಜ್ಯಾಧೀಶನನ್ನಾಗಿ ಮಾಡಲಿಕ್ಕೂ ಸಿದ್ಧನಿದ್ದನು. ಇದರಿಂದ ಆತನು ಕೇವಲ ತನ್ನ ಗೌರವವನ್ನಷ್ಟೇ ನೋಡದೆ, ನಿಜವಾಗಿಯೂ ಅರಸನಾಗಲಿಕ್ಕೆ ಅರ್ಹನಾರೆಂಬುದನ್ನು ಒರೆಹಚ್ಚಿನೋಡಿ ನಿಶ್ಚಯಿಸಿ ವರ್ತಿಸುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ.

ಧ್ರುವನು ತನ್ನ ಆಯುಷ್ಯದಲ್ಲಿ ಮತ್ತೊಬ್ಬ ಬಲಾಢ್ಯ ಶತ್ರುವಿನೊಡನೆ ಹೋರಾಡಬೇಕಾಯಿತು. ಮಾಳವೆಯ ರಾಜನಾದ ವತ್ಸರಾಜನು ಬಂಗಾಳವನ್ನು ಒಳನುಗ್ಗಿ, ಅಲ್ಲಿಯ ಅರಸನಿಂದ ಎರಡು ಶ್ವೇತಛತ್ರಗಳನ್ನು ಸೆಳೆದುಕೊಂಡು, ಕರ್ನಾಟಕದ ಮೇಲೆ ದಾಳಿಯಿಟ್ಟು ಕರ್ನಾಟಕದ ದಂಡನ್ನು ಸೋಲಿಸಿದನು. ಇದು ಧ್ರುವನಿಗೆ ಗೊತ್ತಾದೊಡನೆ, ಕೆರಳಿ ಕೆಂಡದಂತಾಗಿ ಮಾಳವೆಯ ಭೂಪಾಲನನ್ನು ಮಾರ್ಕೊಂಡನು. ಬೇಸಿಗೆಯಲ್ಲಿಕ್ಕಿದ ಬೇಗೆಗೆ ಅಡವಿಯ ಕರಡವು ಚಟಚಟಲೆಂದು ಉರಿವಂತೆ ಈ ಭುಜಬಲಾಟೋಪದಿಂದ ಖಣಲ್ ಖಣಲ್ಲೆನೆ ಹೊಯ್ಯುವ ಈ ಧ್ರುವನ ಖಡ್ಗಕ್ಕೆ ಪರಬಲವು ಆಹುತಿಯಾಯಿತು. ವತ್ಸರಾಜನು ನಿರ್ಗತೋತ್ಸಾಹನಾಗಿ ದಿಕ್ಕುಪಾಲಾದನು; ಆತನ ಅಪಾರವಾದ ಸಂಪತ್ತಿಯನ್ನೂ ಶ್ವೇತಛತ್ರಗಳನ್ನೂ ಧ್ರುವನು ಕಿತ್ತುಕೊಂಡನು. ಆ ಬಳಿಕ ಧ್ರುವನು ಗುಜರಾಥದಲ್ಲಿ ಕದನದ ನಗಾರಿಯನ್ನು ಹೊಡೆದು, ಅಂತವರೊಡನೆ ಕದಂಗಿ ಕಾದಿ ಅವರ ಹುಟ್ಟಡಗಿಸಿ, ಅದನ್ನು ಕೈವಶ ಮಾಡಿಕೊಂಡು, ತನ್ನ ಮತ್ತೊಬ್ಬ ಮಗನಾದ ಇಂದ್ರನಿಗೆ ಗುಜರಾಥದಲ್ಲಿ ಪಟ್ಟಗಟ್ಟಿದನು.

ಒಟ್ಟಿಗೆ ಧ್ರುವನು ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಒದಗಿದ ಕುತ್ತಿನ ಸಮಯದಲ್ಲಿ ಅದನ್ನು ಉಳಿಸಿಕೊಂಡುದಲ್ಲದೆ, ಹೊಸ ರಾಜ್ಯಗಳನ್ನು ಗೆದ್ದು ಒಬ್ಬ ಮಗನಿಗೆ ಗುಜರಾಥ ದೇಶವನ್ನೂ ಮತ್ತೊಬ್ಬನಿಗೆ ಗಂಗರಾಜ್ಯವನ್ನೂ ಕೊಟ್ಟು ಕಿರಿಯ ಮಗನಾದ ೩ನೆಯ ಗೋವಿಂದನನ್ನು ಮುಖ್ಯ ಸಾಮ್ರಾಜ್ಯದ ಯುವರಾಜನನ್ನಾಗಿ ಮಾಡಿದನು. ಹೀಗೆ ತನ್ನ

ಶೌರ್ಯದಿಂದಲೂ ಧೈರ್ಯದಿಂದಲೂ ಧ್ರುವನು ನಿರುಪಮನಾಗಿ ಮೆರೆದು ದರಿಂದ, ಆತನಿಗೆ ಧ್ರುವ ನಿರುಪಮನೆಂಬ ನಾಮಾಭಿಧಾನವು ಪ್ರಾಪ್ತ ವಾಯಿತು. ಕರ್ನಾಟಕದ ಇತಿಹಾಸವೆಂಬ ತೇಜೋಮಂಡಲದಲ್ಲಿ ಆತ ನಿಗೆ ಧ್ರುವ ಪದವಿಯು ದೊರೆಯಿತು.

---

### ರಣರಂಗ ಶಾರ್ದೂಲನಾದ

# ಗೋವಿಂದ

---

## (೭೯೪-೮೧೪)

೮ನೆಯ ಶತಮಾನದ ಕೊನೆಗೂ ೯ನೆಯ ಶತಮಾನದ ಪ್ರಾರಂಭಕ್ಕೂ ರಾಷ್ಟ್ರಕೂಟರಲ್ಲಿ ಆಳಿದ ಘನ ಪರಾಕ್ರಮಿಯಾದ ಗೋವಿಂದನು, ಅವರಲ್ಲಿ ಎಲ್ಲರಿಗಿಂತ ಶೂರನೂ ಧೀರನೂ ರಾಜತಂತ್ರಪ್ರವೀಣನೂ ಆದ ಅರಸನಾಗಿದ್ದನು ಈತನು ಧ್ರುವನ ಕಿರಿಯ ಮಗನು ೬೪ ವರ್ಷ ಎಡೆಬಿಡದ ವಿಜೃಂಭಣೆಯಿಂದ ರಾಜ್ಯವನ್ನಾಳಿ, ಕನ್ನಡ ಭಾಷೆಯ ಸೇವೆಯನ್ನು ಮಾಡಿ ಹೆಸರು ಪಡೆದ ಪ್ರಸಿದ್ಧ ನೃಪತುಂಗ ಅಥವಾ ಅಮೋಘವರ್ಷನೆಂಬುವನು, ಇದೇ ಗೋವಿಂದನ ಮಗನು ಗೋವಿಂದನಿಗೂ ಬಾದಾಮಿಯ ಪ್ರಸಿದ್ಧ ಪುಲಿಕೇಶಿಗೂ ಕೆಲವು ವಿಷಯಗಳಲ್ಲಿ ಸಾಮ್ಯವಿದೆ ಇಬ್ಬರೂ ಸಮರಧುರಂಧರರು, ಜಗದೇಕವೀರರು ಇಬ್ಬರೂ ಚಿಕ್ಕವರಿದ್ದಾಗಲೇ ಸಾಮ್ರಾಜ್ಯವನ್ನು ರಕ್ಷಿಸುವ ಭಾರವನ್ನು ಹೊರಬೇಕಾಯಿತು ಪಟ್ಟವೇರಿದ ಕೂಡಲೆ ಇಬ್ಬರಿಗೂ ಪ್ರಬಲರಾದ ಅರಿಗಳೊಡನೆ ಕಾದಬೇಕಾಯಿತು ಇಬ್ಬರೂ ಆ ಕಾರ್ಯವನ್ನು ಅತ್ಯಂತ ಕುಶಲತೆಯಿಂದಲೂ ಧೈರ್ಯದಿಂದಲೂ ಜರುಗಿಸಿ ಯಶಸ್ವಿಗಳಾದರು. ನರ್ಮದಾ ನದಿಯನ್ನು ದಾಟಿ ಹೋಗಿ ಯುದ್ಧಚಮತ್ಕೃತಿಯನ್ನು ಇಬ್ಬರೂ ತೋರಿಸಿದರು ಪುಲಿಕೇಶಿಯ ಜೀವನದಂತೆಯೆ ಗೋವಿಂದನ ಜೀವನವೂ ಸಾಹಸ ಕಾರ್ಯಗಳಿಂದಲೂ ರಾಜಕಾರಣಚಾತುರ್ಯದಿಂದಲೂ ತುಂಬಿ ತುಳುಕುತ್ತಿದೆ ಆತನ ತಂದೆಯಾದ ಧ್ರುವನು ಉತ್ತರದಲ್ಲಿ ಕೈಕೊಂಡ ವಿಜಯ ಯಾತ್ರೆಯಲ್ಲಿ, ಆಗ ಬಾಲಕನಾಗಿದ್ದ

ಗೋವಿಂದನು ತನ್ನ ತೋಳ್ಬಲದ ಅಗ್ಗಳಿಕೆಯನ್ನು ಪ್ರದರ್ಶಿಸಿದ್ದನು. ಧ್ರುವನು ಮಾಳವೆ ಗುಜರಾಥ ಕೋಸಲಗಳನ್ನು ಗೆದ್ದುಕೊಳ್ಳಲಿಕ್ಕೆ ಹೋದಾಗ, ಗೋವಿಂದನ ಉಕ್ಕಿನಂತಹ ಎದೆಯಿಂದುಕ್ಕಿದ ಪರಾಕ್ರಮದ ಪ್ರತಿಭೆಯನ್ನು ಕಂಡಿದ್ದನು. ಆಗಿನ ಕಾಲದಲ್ಲಿ ತಮ್ಮ ಮಕ್ಕಳನ್ನು ಮಾರಿಯ ಬಾಯಿಗೆ ಕೊಡಲಿಕ್ಕೆ ಸಮ್ರಾಟರು ಕೂಡ ಹಿಂಜರಿಯುತ್ತಿರಲಿಲ್ಲ, ಅಳುಕುತ್ತಿರಲಿಲ್ಲ. ಇದಕ್ಕೆ ವಿಪರೀತವಾಗಿ, ಹೀಗೆ ತಮ್ಮ ಮಕ್ಕಳನ್ನು ಮೃತ್ಯುವಿನ ಬಾಯಲ್ಲಿ ನೂಗಿಸುವುದೂ ಇದರಿಂದ ಅವರು ಸಾವಾಗಿ ಬರುವುದೂ ಭೂಷಣವೆಂದೇ ಬಗೆಯುತ್ತಿದ್ದರು. ಗೋವಿಂದನು ಹೀಗೆ ಅನೇಕ ಸಲ ಕಾಲನ ಕೋರೆಹಲ್ಲುಗಳೊಳಗೆ ಹೊಕ್ಕು ಬಂದುದನ್ನು ನೋಡಿ ತಂದೆಗೆ ಹಿಡಿಸಲಾರದಷ್ಟು ಆನಂದವಾಯಿತು. ಅತನು ಮಿಕ್ಕ ಮಕ್ಕಳನ್ನು ಬದಿಗೊತ್ತಿ ಶೂರನಾದ ಈ ಚಿಕ್ಕ ಮಗನಿಗೆ ಪಟ್ಟವನ್ನು ಕೊಡುವುದನ್ನು ನಿಶ್ಚಯಿಸಿದನು. ಗೋವಿಂದನ ಸಲುವಾಗಿ ಧ್ರುವನು ರಾಜ್ಯವನ್ನು ಬಿಟ್ಟುಕೊಡುವಷ್ಟು ಗೋವಿಂದನು ಗಂಭೀರನೂ ಗುಣವಂತನೂ ಆಗಿದ್ದನು. ಆದರ ಅಷ್ಟರಲ್ಲಿ ಧ್ರುವನು ಇಹಲೋಕವನ್ನೇ ಬಿಟ್ಟುಕೊಟ್ಟು ಹೋದನು. ತಂದೆಯ ಇಚ್ಛೆಯಂತೆ ಗೋವಿಂದನು ರಾಷ್ಟ್ರಕೂಟ ಸಿಂಹಪೀಠವನ್ನೇರಿದನು.

ಪಟ್ಟವನ್ನೇರುವುದು ಸುಲಭವಾದಷ್ಟು ಅದನ್ನು ರಕ್ಷಿಸಿಕೊಳ್ಳುವುದು ಸುಲಭವಲ್ಲ. ತಂದೆಯು ಹಿರಿಯ ಮಗನನ್ನು ಮೂಲೆಗೊತ್ತಿ ಈ ಕಿರಿಯ ಮಗನನ್ನು ಏರಿಸಿ ಕುಳ್ಳಿರಿಸಿದುದರಿಂದ, ಗೋವಿಂದನ ಅಣ್ಣನಾದ ಕಂಭಯ್ಯನು ಪ್ರಕೋಪಗೊಂಡಿದ್ದನು. ಮಾಳವೆ ಗುಜರಾಥದ ರಾಜ್ಯಗಳನ್ನು ಧ್ರುವನು ಕಸಿದುಕೊಂಡದ್ದರಿಂದ, ಆ ದೇಶಗಳ ಅರಸರು ರಾಷ್ಟ್ರಕೂಟರನ್ನು ಹತ್ತೋತ್ತ್ಯವುದಕ್ಕೆ ಹೊಂಚುಹಾಕುತ್ತಿದ್ದರು. ಕಂಚಿಯ ಪಲ್ಲವರು ಕರ್ನಾಟಕದ ಕಡು ಹಗೆಗಳು. ಕರ್ನಾಟಕವನ್ನು ಬಾದಾಮಿಯ ಚಾಳುಕ್ಯರಾಳುತ್ತಿದ್ದಾಗ ಪಲ್ಲವರಿಗೂ ಚಾಳುಕ್ಯರಿಗೂ ಪದೇ ಪದೇ ಕಾಳಗಗಳಾಗುತ್ತಿದ್ದುವು. ಅವರ ತರುವಾಯ ರಾಷ್ಟ್ರಕೂಟರು ಆಸ್ಥಾನಕ್ಕೆ ಬಂದುದರಿಂದ ಪಲ್ಲವರಿಗೂ ರಾಷ್ಟ್ರಕೂಟರಿಗೂ ಅನೇಕ

ಕದನಗಳಾಗುತ್ತಿದ್ದವು  ಇದಲ್ಲದೆ ಚಾಳುಕ್ಯರ ರಾಜ್ಯವನ್ನು ರಾಷ್ಟ್ರಕೂಟರು ನುಂಗಿದ್ದ ಮೂಲಕ, ಬಾದಾಮಿಯ ಚಾಲುಕ್ಯರೂ ರಾಷ್ಟ್ರಕೂಟರ ಮೇಲೆ ದ್ವೇಷವನ್ನು ಕಾರತಕ್ಕವರು  ಕೆಲವು ಚಾಳುಕ್ಯರು ಆಗ ವೆಂಗಿಯಲ್ಲಿ ಆಳುತ್ತಿದ್ದರು  ಅರ್ಥಾತ್ ಅವರೂ ಶತ್ರುಗಳು  ಅರಾತಿ ಪರಿಷ್ಕಾವೃತನಾದ ಗೋವಿಂದನು, ಗಂಗರಾಜ್ಯದ ಅರಸನಾದ ಶಿವಮಾರನನ್ನು ಬಂಧನದಿಂದ ಬಿಡುಗಡೆಮಾಡುವುದರಿಂದಲೇ ತನಗೆ ಲಾಭವಾಗುವುದೆಂದೆಣಿಸಿ ಅವನ ಬಂಧನವನ್ನು ಬಿಡಿಸಿದನು  ಇದರಿಂದ ಆತನಿಗೆ ಶಿವಮಾರನು ಶತ್ರುವಾಗಲಿಲ್ಲ  ಆದರೆ ಶಿವಮಾರನು ಅತ್ಯಂತ ಮಹತ್ವಾಕಾಂಕ್ಷೆಯುಳ್ಳವನೂ ಅಭಿಮಾನಿಯೂ ಆದುದರಿಂದ, ಕಳೆದುಕೊಂಡ ಗಂಗರಾಜ್ಯವನ್ನು ಮರಳಿ ಸಂಪಾದಿಸುವ ಪ್ರಯಾಸಕ್ಕೆ ಬಿದ್ದನು  ಆತನ ಒಲವು ಕಂಭಯ್ಯನ ಕಡೆಗೆ ಹೊರಳಿತು  ಮತ್ತು ಅತನು ತನ್ನ ಹಿರಿದಾದ ಆಸೆಯನ್ನು ನೆರವೇರಿಸಿಕೊಳ್ಳಲುದ್ಯುಕ್ತನಾದನು  ಆದಕಾರಣ ಶಿವಮಾರನು ಗೋವಿಂದನಿಗೆ ಏನೂ ಸಹಾಯ ಮಾಡಲಿಲ್ಲ  ಇದನ್ನು ಸೂಕ್ಷ್ಮವಾಗಿ ಅರಿತುಕೊಂಡು ಗೋವಿಂದನು ಪುನಃ ಆತನನ್ನು ಹಿಡಿದು ತರಿಸಿ ಕಾರಾಗೃಹದಲ್ಲಿಡಿಸಿದನು

ಅಣ್ಣ ಕಂಭಯ್ಯ, ವೆಂಗಿಯ ಚಾಳುಕ್ಯರು, ಬಾದಾಮಿಯ ಚಾಳುಕ್ಯರು, ಕಂಚಿಯ ಪಲ್ಲವರು, ಗುಜರಾಥರು, ಲಾಟರು, ಮಾಳವರು, ಕೇರಳರು ಇತ್ಯಾದಿ ೧೨ ಮಂದಿ ಬಲಾನ್ವಿತರಾದ ಅರಸರು ಗೋವಿಂದನ ವಿರುದ್ಧವಾಗಿ ಒಮ್ಮೆಲೆ ಹುಯ್ಯಲೆಬ್ಬಿಸಿದರು  ಹೀಗೆ ಎಲ್ಲರೂ ಇವನನ್ನು ಮರ್ದಿಸುವ ಹವಣಿಕೆಯವರೇ ಹೊರತು ಗೋವಿಂದನ ಸಹಾಯಕ್ಕೆ ಒಬ್ಬನೂ ಇರಲಿಲ್ಲ  ಆದರೆ ಗೋವಿಂದನು ಅಸಹಾಯಶೂರನು, ಯುಕ್ತಿವಂತನು  ಆತನು ಸೆರೆಯಲ್ಲಿರುವ ಶಿವಮಾರನಿಗೆ ಇನ್ನಷ್ಟು ಆಸೆದೋರಿಸಿ ನೋಡಿದನು  ಆತನನ್ನು ಬಿಡುಗಡೆ ಮಾಡಿ ಗಂಗನಾಡಿನ ಮಂಡಲಾಧೀಶನನ್ನಾಗಿ ಮಾಡುವೆನೆಂದು ಹೇಳಿ, ಆತನನ್ನು ತನ್ನ ಕಡೆಗೆ ಒಲಿಸಿಕೊಳ್ಳಲು ಮತ್ತೆ ಪ್ರಯತ್ನ ಮಾಡಿದನು  ಆದರೆ ಸ್ವಾಭಿಮಾನಿಯಾದ ಶಿವಮಾರನು ಅದಕ್ಕೊಪ್ಪಲಿಲ್ಲ  ಅಂತಿಂಥವರಾಗಿದ್ದರೆ ಈ ಕಠಿನ

ಪರಿಸ್ಥಿತಿಯಲ್ಲಿ ಕೈ ಕಾಲುಗೆಡುತ್ತಿದ್ದರು ಗೋವಿಂದನಂದೇ ಅವಕ್ಕೆ ಎದೆ
ಗೊಟ್ಟು ನಿಂತಿದ್ದಾನೆ ಅವನು ಅಳ್ಳೆದೆಯವನಲ್ಲ ಇಂತಹ ಬಿಕ್ಕಟ್ಟಿನ
ಲ್ಲಿಯೂ ಆತನ ಎದೆ ನಡುಗಲಿಲ್ಲ ಗೋವಿಂದನು ತನ್ನ ಭುಜಬಲಾ
ವಷ್ಟಂಭದಿಂದ ಶಿವಮಾರನನ್ನು ಬಂಧಿಸಿ ಮತ್ತೆ ಸೆರೆಯಲ್ಲಿಟ್ಟನು.
ತನ್ನ ವಾಹಿನಿಯನ್ನು ಹುರಿಮುಂಬಿಸಿಕೊಂಡು ವೆಂಗಿಯಮೇಲೆ ಸಾಗಿ
ದನು ವೆಂಗಿಯ ದೊರೆಯಾದ ಆ ನಯ ನರೇಂದ್ರಮೃಗರಾಜ ವಿಜ
ಯಾದಿತ್ಯನು ಇವನನ್ನು ಅಬ್ಬರದಿಂದ ಮಾರ್ಕೊಂಡನು ಗೋವಿಂದನು
ಅರಿಸೈನ್ಯದ ಬೇಟೆಯಾಡತೊಡಗಿದನು, ಒತ್ತೊತ್ತಿ ಬರುವ ಸೈನ್ಯಕ್ಕೆ
ಅವನು ಇದಿರಾಗಿ ತಾಗಿ ತಳ್ತಿರಿದು ಕೊಂದನು ಕಡುಗಲಿಗಳೆಲ್ಲರನ್ನು
ಕಡಿಖಂಡವಾಗಿ ಮಾಡಿದನು, ಮೃಗರಾಜನು ಮತಿಗೆಟ್ಟು ಗತಿಗೆಟ್ಟು
ಸೋತು ತಲೆ ತಗ್ಗಿಸಿದನು ಗೋವಿಂದನು ಆ ಪ್ರಚಂಡ ಕಲಿಮಾರ್ತಾಂಡ
ನಿಗೆ, ಮಳಖೇಡದಲ್ಲಿರುವ ತನ್ನ ಕುಮರಿಯ ಶರ್ತನ ಸ್ಥಳದ ಸುತ್ತಲು
ಎತ್ತರವಾದ ಗೋಡೆಯನ್ನು ಕಟ್ಟಬೇಕೆಂದು ಕಟ್ಟಪ್ಪಣೆಯನ್ನಿತ್ತನು
ಆ ವಿಜಯಾದಿತ್ಯನ ವೈಭವದಲ್ಲಿ, ಚೆಲುವಾದ ತರಗಳಿಂದೊಪ್ಪುವ, ಜಲ
ಚರಗಳ ಚಲನೆಯಿಂದ ಅಂದವಾದ, ಧವಲ ಶ್ಯಾಮಲವರ್ಣಗಳಿಂದ ಬಗೆ
ಗೊಳಿಸುವ ಗಂಗಾ ಯಮುನಾ ಮೂರ್ತಿಗಳಿದ್ದುವು, ಅವು ಗೋವಿಂದನ
ಭಾಂಡಾರವನ್ನು ಸೇರಿದುವು ಹೀಗೆ ಬಲಿಷ್ಠನಾದ ಶಿವಮಾರನನ್ನು
ಬಂಧಿಸಿ ಉದ್ದಾಮಭೀಮನಾದ ವಿಜಯಾದಿತ್ಯನನ್ನು ಅವಮಾನಗೊಳಿ
ಸಿದ್ದರಿಂದ ಮಿಕ್ಕ ರಾಜರು ಅಂಜಿ ಗೋವಿಂದನಿಗೆ ಶರಣಾದರು
ವೆಂಗಿಯ ಚಾಳುಕ್ಯರಿಗೂ ರಾಷ್ಟ್ರಕೂಟರಿಗೂ ಎಡೆಬಿಡದ ಕಾಳಗ ನಡೆದು
ಕೊನೆಗೆ ಗೋವಿಂದನಿಗೆ ಜಯವಾಗಿ ಹೀಗೆ ವಿಜಯಾದಿತ್ಯನು ಅಸಹ್ಯ
ವಾದ ಅಪಮಾನಕ್ಕೆ ಈಡಾದನು ಆಮೇಲೆ ಗೋವಿಂದನು ವಿಂಧ್ಯಾ
ದ್ರಿಯ ಆಚೆಗೆ ಕಾಲಿಟ್ಟನು ದಾರಿಯಲ್ಲಿ ಮಾರಶರ್ಮನು ಆತನಿಗೆ ಶರಣಾ
ಗತನಾದನು, ಮಾರಶರ್ಮನು ಅಪರೂಪವಾದ ಅಮೂಲ್ಯವಾದ ಒಡವೆ
ಗಳನ್ನು ಕಾಣಿಕೆಯನ್ನಾಗಿ ಗೋವಿಂದನಿಗೆ ಸಮರ್ಪಿಸಿದನು ಗೋವಿಂ
ದನು ಉತ್ತರ ಯಾತ್ರೆಯನ್ನು ತೀರಿಸಿಕೊಂಡು ಶ್ರೀಭವನದಲ್ಲಿ ಮಳೆಗಾಲ
ವನ್ನು ವಿರಾಮವಾಗಿ ಕಳೆದನು ಆನಂತರ ಮತ್ತೆ ರಣಯಜ್ಞಕ್ಕಾಗಿ

ಶಸ್ತ್ರಾಸ್ತ್ರಬದ್ಧಹಸ್ತನಾದನು. ದಕ್ಷಿಣಕ್ಕೆ ತೆರಳಿ ತುಂಗಭದ್ರಾತೀರದ ರಾಮೇಶ್ವರ ತೀರ್ಥವೆಂಬಲ್ಲಿ (ಚಿತ್ರದುರ್ಗಜಿಲ್ಲೆ) ಬೀಡುಬಿಟ್ಟನು. ಗೋವಿಂದನು ಮೃಗಯಾವಿನೋದದಲ್ಲಿ ಮನಸ್ಸಿಟ್ಟವನು. ಅಲ್ಲಿಯ ಕಾಡು ನಿಬಿಡವಾದುದು, ಅದರಲ್ಲಿ ಕಾಡುಹಂದಿಗಳು ವಿಪುಲವಾಗಿದ್ದುವು, ಅವು ಮಹಾರೌದ್ರವಾಗಿದ್ದುವು, ಅವುಗಳದು ಕೊಬ್ಬಿದ ಮೈ, ಮದೋನ್ಮತ್ತವಾದ ನಡಿಗೆ, ಇದನ್ನು ಕೇಳಿ ಗೋವಿಂದನ ಬೇಟೆಯ ಲವಲವಿಕೆ ಇಮ್ಮಡಿಸಿತು. ಅವನು ಮಿತಪರಿವಾರದೊಡನೆ ಕಾನನವನ್ನು ಹೊಕ್ಕು ಆರ್ದಾರ್ದು ಮೆಳೆಮೆಳೆಗಳಿಂದ ಹಂದಿಗಳನ್ನೆಬ್ಬಿಸಿದನು. ಅವು ಜಂಗುಳಿಯಾಗಿ ಬಂದು ದಾಡೆಗಳನ್ನು ಮಸೆದು ಗೋವಿಂದನ ಸೈನ್ಯವನ್ನು ಹಾಯ್ದುವು, ಗೋವಿಂದನು ಅವುಗಳ ಆರ್ಭಟವನ್ನು ಕೇಳಿ ಮತ್ತು ಅವು ತನ್ನ ಸೈನ್ಯವನ್ನು ತಿವಿತ್ತುಳಿದುಳಿವುದನ್ನು ನೋಡಿ ಮುಮ್ಮಡಿ ನಾಲ್ಮಡಿ ಆವೇಶವನ್ನು ಹೊಂದಿದನು, ಕೆಲವನ್ನು ಬಾಣಪ್ರಪಾತದಿಂದಲೂ ಕೆಲವನ್ನು ಖಡ್ಗಾಘಾತದಿಂದಲೂ ಕೊಂದು ಹಂದಿಗಳ ಬಣವೆಯನ್ನೊಟ್ಟಿದನು. ಹೀಗೆ ಹಂದಿಗಳ ಬೇಟೆಯನ್ನು ಮುಗಿಸಿಕೊಂಡು ಗೋವಿಂದನು ಪಲ್ಲವರ ಪಾದುಶತ್ಯವನ್ನು ಮಾಡುವುದಕ್ಕೆ ಅನುವಾದನು. ಇದನ್ನು ತಿಳಿದು, ಪಲ್ಲವೇಂದ್ರನು ತುಂಗಭದ್ರಾ ತೀರದಲ್ಲಿರುವ ಗೋವಿಂದನ ಪಾಳಯದ ವರೆಗೆ ತಾನೇ ಬಂದು, ಆತನೊಂದಿಗೆ ಒಡಂಬಡಿಕೆಯನ್ನು ಮಾಡಿಕೊಂಡನು. ಹೀಗೆ ಕಂಚಿಯ ಪಲ್ಲವರಾಜನಾದ ದಂತಿದುರ್ಗನು ಮರಹೊಕ್ಕ ತರುವಾಯ ಗೋವಿಂದನ ವೀರದೃಷ್ಟಿಯು ಕೇರಳನಾಡಿನ ಕಡೆ ತಿರುಗಿತು. ಆ ಕೇರಳನು ಈ ಅರಿರಾಜಗಜಕೇಸರಿಯೊಡನೆ ಕಾದಾಡಲು ಆರ್ಪಿಲ್ಲದೆ ಒಡಂಬಡಿಕೆ ಮಾಡಿಕೊಂಡನು. ಇಂತು ದಿಗ್ವಿಜಯವನ್ನು ಮುಗಿಸಿಕೊಂಡು ಗೋವಿಂದನು ಮರಳಿ ತನ್ನ ರಾಜಧಾನಿಯಾದ ಮಳಖೇಡಿಗೆ ಬಂದನು.

ಇತ್ತ ಶಿವಮಾರನನ್ನೂ ಸೆರೆಮನೆಯಲ್ಲಿ ಕೊಳೆಯುತ್ತ ಬಿದ್ದಿದ್ದನಷ್ಟೆ. ಆತನ ಹೃದಯದಲ್ಲಿರುವ ಸ್ವಾಭಿಮಾನದ ಕೆಚ್ಚು ಅಚ್ಚಳಿಯದೆ ಇತ್ತು. ಗೋವಿಂದನು ಆತನ ಚಿತ್ತಸ್ಥೈರ್ಯಕ್ಕೂ ಕಷ್ಟಸಹನಶೀಲತೆಗೂ

ಮೆಚ್ಚಿದನು. ಇಷ್ಟೊತ್ತಿಗೆ ಕಂಭಯ್ಯನು ತೀರಿಕೊಂಡಿದ್ದನು. ಆದುದರಿಂದ ಗೋವಿಂದನು ಶಿವಮಾರನನ್ನು ಪುನಃ ಬಂಧಮುಕ್ತನನ್ನಾಗಿ ಮಾಡಿದನು. ಪಲ್ಲವ ಅರಸನಾದ ನಂದಿವರ್ಮನೂ ಗೋವಿಂದನೂ ಗಂಗದೇಶದ ರಾಜಧಾನಿಯಾದ ತಲಕಾಡಿನಲ್ಲಿ ಶಿವಮಾರನಿಗೆ ಮೂರ್ಧಾಭಿಷೇಕವನ್ನು ಮಾಡಿದರು. ಇದರಿಂದ ಗೋವಿಂದನು ಬರೀ ರಾಜ್ಯಲೋಭಗ್ರಸ್ತನಲ್ಲವೆಂದೂ ಗುಣಗ್ರಾಹಿಯಾದ ದೂರದರ್ಶಿಯೆಂದೂ ನಾಡೆಲ್ಲ ಹೊಗಳಿತು. ಆತನು ನಿಜವಾಗಿಯೂ ತನ್ನ ರಾಜ್ಯವನ್ನು ಬೆಳೆಯಿಸಬೇಕೆಂಬ ಲಾಲಸೆಯುಳ್ಳವನಾಗಿದ್ದರೆ ಶಿವಮಾರನ ಪ್ರಾಣಗಳು ಆತನ ಕೈಯಲ್ಲಿದ್ದುವು; ಗಂಗಮಂಡಲವು ಆತನ ಅಧೀನದಲ್ಲಿತ್ತು; ನೆರೆಹೊರೆಯವರೆಲ್ಲ ಆಪ್ತರಾಗಿದ್ದರು— ಆತನು ಶಿವಮಾರನನ್ನು ಶೂಲಕ್ಕೇರಿಸಿ ಮೆರೆಯಬಹುದಾಗಿತ್ತು. ಆದರೂ ಗಂಗರಾಜ್ಯವನ್ನಾತನಿಗೊಪ್ಪಿಸಿ ಗೋವಿಂದನು ನಿಃಸ್ವಾರ್ಥನೆಂದು ಪ್ರಖ್ಯಾತನಾದನು.

ರಾಷ್ಟ್ರಕೂಟರಲ್ಲಿ ಅತಿಪ್ರಖ್ಯಾತನೆಂದೆನಿಸಿಕೊಂಡ ಈ ಗೋವಿಂದನು ತನ್ನ ಅತುಲ ಪರಾಕ್ರಮದಿಂದ ಕರ್ನಾಟಕದ ಕೀರ್ತಿಯ ಪ್ರಭೆಯನ್ನು ಹೆಚ್ಚಿಸಿ ಅಜರಾಮರನಾದನು.

---

# ಸ್ವಾತಂತ್ರ್ಯಪ್ರಿಯನಾದ
# ಶಿವಮಾರ

---

(೭೭೬-೮೧೫)

ಜಯಾಪಜಯಗಳು ಕೇವಲ ಮನುಷ್ಯನ ಶೌರ್ಯ ಸಾಹಸಗಳನ್ನವಲಂಬಿಸಿರುವುದಿಲ್ಲ. ಜಯವು ದೈವಾಯತ್ತ, ಪ್ರಯತ್ನವು ಪುರುಷಾಯತ್ತ. ಪರಾಕ್ರಮಿಗಳಾದವರೆಷ್ಟೋ ಜನರು ಅದಕ್ಕೆ ತಕ್ಕ ಪ್ರತಿಫಲವನ್ನು ಹೊಂದದೆ ಅಪಯಶಸ್ಸಿಗೆ ಗುರಿಯಾದುದನ್ನು ನಾವು ಇತಿಹಾಸದಲ್ಲಿ ಓದುತ್ತೇವೆ. ಗಂಗರಸನಾದ ಶಿವಮಾರನೂ ಅಂತಹ ಪುರುಷರಲ್ಲೊಬ್ಬನು. ಈತನು ಅದಟನಾದರೂ ಅತ್ಯಂತ ಮಹಾಗರ್ವಿಯೂ, ಮಹಾಗರ್ವಿಯಾದರೂ ಸ್ವಾಭಿಮಾನಿಯೂ, ಸ್ವಾಭಿಮಾನಿಯಾದರೂ ವಿನಮ್ರನು. ಎಂಟನೆಯ ಶತಮಾನದ ಕೊನೆಯಲ್ಲಿ ಆತನು, ೮೦೦ ವರುಷಗಳಿಂದ ಅಚ್ಚಳಿಯದೆ ನಿಂದ ಗಂಗರಾಜ್ಯವನ್ನು ರಾಷ್ಟ್ರಕೂಟರಿಗೆ ತೆತ್ತುದೇನೋ ನಿಜ. ಆದರೂ ಆತನು ಆ ಸಂಕಟ ಸಮಯದಲ್ಲಿ ತೋರಿಸಿದ ಶೌರ್ಯ ಧೈರ್ಯಗಳು ಅವರ್ಣನೀಯವಾಗಿರುತ್ತವೆ.

ಶಿವಮಾರನ ತಂದೆ ಶ್ರೀಪುರುಷನು, ಅಥವಾ ಮುತ್ತರಸನು. ಈತನೇ ಗಂಗರಾಜರಲ್ಲಿ ಅತ್ಯಂತ ಶ್ರೇಷ್ಠನು. ಈತನು ಅರ್ಧ ಶತಮಾನಕ್ಕಿಂತ ಹೆಚ್ಚು ಕಾಲ ರಾಜ್ಯವನ್ನಾಳಿದನು. ಮುಂದೆ ಸಾಮ್ರಾಜ್ಯವನ್ನು ಸ್ವಗೊಟ್ಟಿನಿಗೆ ಎಂದರೆ ಶಿವಮಾರನಿಗೆ ಒಪ್ಪಿಸಿ ಮೃತನಾದನು. ಶಿವಮಾರನ ಆಯುಷ್ಯವೆಲ್ಲವೂ ಗಂಡಾಂತರಗಳಲ್ಲಿಯೇ ಹೋಯಿತು. ಇವನ ಜೀವನ ಮಾರ್ಗವೆಲ್ಲ ಕಂಟಕಮಯವಾಗಿತ್ತು. ಆದರೆ ಸುವರ್ಣವು ದಗ್ಧವಾದಂತೆಲ್ಲ ಅದರ ಕಾಂತಿ ಹೆಚ್ಚುವುದಿಲ್ಲವೆ? ಹಾಗೆ ಶಿವಮಾರನ ಎದೆಗೆ ಸಂಕಟ ಶ್ರೇಣಿಗಳು ಒಂದಪ್ಪಳಿಸಿದಂತೆ ಆತನ ಸ್ವಾಭಿಮಾನವೂ ಶೌರ್ಯವೂ

ಹೆಚ್ಚುಹೆಚ್ಚು ಬೆಳಗಲಾರಂಭಿಸಿದವು ಮತ್ತು "ಸಾಹಸೀ ಶ್ರೀಪ್ರತಿವಸತಿ" ಎಂಬಂತೆ ಆತನು ಕಟ್ಟಕಡೆಗೆ ಸೆರೆವಿನ ವಿಪತ್ಪ್ರವಾಹವನ್ನು ಈಸಿದನು, ಅವನನ್ನು ಬಂಧಿಸಿಟ್ಟ ಹಗೆಯೇ ಪ್ರೀತಿಯ ಮಿತ್ರನಾದನು, ಇಷ್ಟೆ ಅಲ್ಲ ಆ ವೀರಪುಂಗವನಿಂದಲೇ ತನ್ನ ಪಟ್ಟಬಂಧೋತ್ಸವವನ್ನು ಈ ಶಿವಮಾರನು ಮಾಡಿಸಿಕೊಂಡನು

ಗಂಗರಸರು ಎಂದೆಂದೂ ಸೋಲದವರೆಂದು ಖ್ಯಾತಿಯನ್ನು ಪಡೆದವರು ಆದರೆ ದೈವದ ಮುಂದೆ ಒಡುವವರಾರು? ಶಿವಮಾರನಿಗೆ ಶೂರನಾದ ಧ್ರುವನು ಹಗೆಯಾದುದರಿಂದ ಆತನು ಯುದ್ಧದಲ್ಲಿ ಸೆರೆ ಹಿಡಿಯಲ್ಪಟ್ಟನು ಆಗ ಗಂಗಸಾಮ್ರಾಜ್ಯದ ಮೇಲೆ ಬರಸಿಡಿಲು ಛಡಲ್ಲನೆ ಎರಗಿದಂತಾಯಿತು ಏಕೆಂದರೆ ಶಿವಮಾರನಂತಹ ಭೂಮೀಶನು ಸೆರೆಯಾಳಾಗುವುದೇನೂ ಸಾಮಾನ್ಯವಾದ ಮಾತಲ್ಲ ಧ್ರುವನು ತಾನು ಸಾಯುವವರೆಗೂ ಶಿವಮಾರನನ್ನು ಬಿಡಲಿಲ್ಲ ಆದಕಾರಣ ಶಿವಮಾರನು ಅನೇಕ ವರ್ಷಗಳವರೆಗೆ ಕಾರಾಗೃಹದ ಕಷ್ಟಗಳನ್ನು ಅನುಭವಿಸುತ್ತ ನವೆಯಬೇಕಾಯಿತು ರಾಜಕಾರಣದಲ್ಲಿ ಯಾವಾಗ ಎಲ್ಲಿಂದ ಎಂತಹ ಬಿರುಗಾಳಿಯೇಳುತ್ತದೆಯೋ ಗೊತ್ತಾಗುವುದಿಲ್ಲ ಮುಂದೆ, ಧ್ರುವನು ತೀರಿದೊಡನೆಯೆ ಗೋವಿಂದನು ಪಟ್ಟವೇರಿದನು, ಆತನು ತನ್ನ ಅಣ್ಣನನ್ನು ದೂರವಿಟ್ಟು ತಾನೇ ರಾಷ್ಟ್ರದ ಸಾರ್ವಭೌಮನಾದಕಾರಣ, ತನ್ನ ಗಾದಿಯನ್ನು ಸ್ಥಿರಪಡಿಸಿಕೊಳ್ಳುವುದಕ್ಕಾಗಿ ಆತನಿಗೆ ಅನ್ಯರ ನೆರವು ಬೇಕಾಗಿತ್ತು ಶಿವಮಾರನಂತಹ ಅತುಲಸಾಹಸಾನ್ವಿತನನ್ನು ಬಂಧನದಲ್ಲಿಡುವುದಕ್ಕಿಂತ ಆತನನ್ನು ಬಿಟ್ಟು ತನ್ನ ಸ್ನೇಹಿತನನ್ನಾಗಿ ಮಾಡಿಕೊಳ್ಳುವುದೇ ಲೇಸೆಂದು ಆಲೋಚಿಸಿದನು ಶಿವಮಾರನು ಬಂಧ ಮುಕ್ತನಾದನು ಹೀಗೆ ಉಪಕಾರ ಮಾಡುವುದರಿಂದಲಾದರೂ ಶಿವಮಾರನು ತನ್ನ ಕಡೆಗೆ ಬರಬಹುದೆಂದು ಗೋವಿಂದನಿಗೆ ಆಸೆಯಿತ್ತು ಆದರೆ ಶಿವಮಾರನ ಅಂತರಂಗದಲ್ಲಿ ಸೆರೆಯಾಳಾದಾಗಲೂ ಸ್ವಾತಂತ್ರ್ಯದ ಕಲ್ಪನೆಗಳೇ ತುಂಬಿದ್ದುವು ಅವನು ಹೊರಬಿದ್ದೊಡನೆಯೆ ಅದರ ಸಂಪಾದನೆಗಾಗಿ ಹೆಣಗಾಡ ತೊಡಗಿದನು ಮಧ್ಯದಲ್ಲಿ ಗಂಗಮಂಡಲದೊಡೆಯನಾಗಿದ್ದ ರಾಷ್ಟ್ರ,

ಕೂಟ ಕಂಭಯ್ಯನೂ ತನ್ನ ತಮ್ಮನಾದ ಗೋವಿಂದನನ್ನು ನೂಕುವುದ ಕ್ಕಾಗಿ ಹಾತೊರೆದು ಕುಳಿತಿದ್ದನು ಶಿವಮಾರನು ಸೆರೆಮನೆಯಿಂದ ಬಿಡು ಗಡೆ ಹೊಂದಿದೊಡನೆ ಕಂಭಯ್ಯನು ಆತನ ಸಹಾಯವನ್ನು ಕೇಳಿದನು ಶಿವಮಾರನಿಗಾದರೂ ಗೋವಿಂದನನ್ನು ಕೂಡಿಕೊಳ್ಳುವುದಕ್ಕಿಂತ ಕಂಭ ಯ್ಯನಿಗೆ ಕೈಗೊಟ್ಟರೆ ಹೆಚ್ಚು ಲಾಭವೆಂದು ತೋರಿತು ಪ್ರಬಲನಾದ ಗೋವಿಂದನನ್ನು ಕೂಡಿ ಈ ಚಿಕ್ಕ ಮಂಡಲಾಧಿಪನನ್ನು ಅಡಗಿಸುವುದ ರಿಂದ ತನ್ನ ಸ್ವಾತಂತ್ರ್ಯವು ಸಾಧಿಸಲಾರದೆಂದೂ ಕಂಭಯ್ಯನನ್ನು ಬೆರತು, ಗೋವಿಂದರಾಜನನ್ನು ಮುರಿದೊಗೆಯದೆ ಗತ್ಯಂತರವಿಲ್ಲವೆಂದೂ ಶಿವಮಾರನು ಭಾವಿಸಿದನು ಆದಕಾರಣ ಆತನು ಗೋವಿಂದನೊಡನೆ ಯುದ್ಧ ಮಾಡುವುದಕ್ಕೆ ಮತ್ತೆ ಸೈನ್ಯವನ್ನು ಕಲೆ ಹಾಕಿದನು ಮತ್ತುಹೊತ್ತು ಸಾಧಿಸಿ, ಮಂಡ್ಯ ತಾಲ್ಲೂಕಿನಲ್ಲಿರುವ ಮುದಗುಂದೂರೆಂಬ ಊರಲ್ಲಿ ರಾಷ್ಟ್ರಕೂಟರು ತಮ್ಮ ಬೀಡನ್ನು ಬಿಟ್ಟುಕೊಂಡಿರುವಾಗ, ಅವರ ಸೈನ್ಯದ ಮೇಲೆ ಆಕಸ್ಮಿತವಾಗಿ ಬಿದ್ದು ಅದನ್ನು ನೋಲಿಸಿದನು ಈ ಸುದ್ದಿ ಯನ್ನು ಕೇಳಿ, ಗೋವಿಂದನು ಉರಿದು ಕೆಂಡವಾದನು ಶಿವಮಾರನಿಗೆ ಎಷ್ಟು ದಯೆಯನ್ನು ತೋರಿಸಿದರೂ ಆತನು ತನಗೆ ವಶನಾಗಲಿಲ್ಲವೆಂಬು ದನ್ನು ನೋಡಿ ಗೋವಿಂದನು ಪುನಃ ಯುಕ್ತಿಯಿಂದ ಶಿವಮಾರನನ್ನು ಹಿಡಿದು ಸೆರೆಮನೆಯಲ್ಲಿಟ್ಟನು ಈ ರೀತಿಯಾಗಿ, ಶಿವಮಾರನ ಆಯುಷ್ಯ ವೆಲ್ಲವೂ ಧ್ರುಗೋವಿಂದರೊಡನೆ ಯುದ್ಧ ಮಾಡಿ ಸೋಲುವುದರಲ್ಲಿಯೇ ಕಳೆದುಹೋಯಿತು ಶಿವಮಾರನು ತನಗೆ ಅನುಕೂಲನಾಗಬೇಕೆಂಬುದೇ ಗೋವಿಂದನ ಉದ್ದೇಶ ಕೊನೆಗೆ ಸ್ವಾತಂತ್ರ್ಯ ಪ್ರಿಯನಾದ ಶಿವಮಾರ ನೇ ಗೆದ್ದನು ಗೋವಿಂದನು ಶಿವಮಾರನನ್ನು ಪುನಃ ಬಂಧಮುಕ್ತ ಮಾಡಿ ಗಂಗವಾಡಿಯ ಅರಸನಾಗಲು ಅವಕಾಶವನ್ನು ಕೊಟ್ಟನು ಶಿವ ಮಾರನು ಗಂಗವಾಡಿಯ ಅರಸನಾದನು ಸ್ವತಃ ಗೋವಿಂದನು ಪಟ್ಟಾಭಿ ಷೇಕೋತ್ಸವಕ್ಕೆ ಬಂದು ಆತನ ತಲೆಯಮೇಲೆ ಕಿರೀಟವನ್ನಿಟ್ಟನು

ಶಿವಮಾರನು ಮೇಲೆ ಹೇಳಿದ ರೀತಿಯಲ್ಲಿ ಮೂರ್ಧಾಭಿಷಿಕ್ತನಾಗಿ ಗಂಗವಾಡಿಯನ್ನು ಆಳಲಾರಂಭಿಸಿದನು ರಾಷ್ಟ್ರಕೂಟ ಗೋವಿಂದನು

ತೀರಿದ ತರುವಾಯ ಅಮೋಘವರ್ಷ ಅಥವಾ ನೃಪತುಂಗನು ರಾಷ್ಟ್ರಕೂಟ ಸಿಂಹಾಸನವನ್ನೇರಿದನಷ್ಟೆ ಆತನ ಆಳಿಕೆಯಲ್ಲಿ ಶಿವಮಾರನು ಆತನ ಮಾಂಡಲಿಕರಲ್ಲೊಬ್ಬನಾಗಿದ್ದನು ಆದರೆ, ಶಿವಮಾರ ಸೈಗೊಟನು ಹೆಸರಿಗೆ ಮಾತ್ರ ಮಾಂಡಲಿಕನಾಗಿದ್ದಂತೆ ತೋರುತ್ತದೆ ವಸ್ತುತಃ ಆತನು ತನ್ನ ರಾಜ್ಯದಲ್ಲಿ ಸ್ವತಂತ್ರನೇ ಆಗಿದ್ದನು ಆತನು ತನ್ನ ರಾಜ್ಯವನ್ನು ಬಳಗಾಂವಿಯ ಜಿಲ್ಲೆಯಲ್ಲಿರುವ ಕಲಭಾವಿಯವರೆಗೆ ಹಬ್ಬಿಸಿದ್ದನು

ಶಿವಮಾರನ ಆಯುಷ್ಯವೆಲ್ಲವೂ ಸೆರೆಮನೆಯಲ್ಲಿಯೇ ಕಳೆದು ಹೋದರೂ ಆತನು ತನ್ನ ವಿದ್ಯಾವ್ಯಾಸಂಗವನ್ನು ಬಿಟ್ಟಿರಲಿಲ್ಲವೆಂಬುದು ಆತನಿಗೆ ಗೌರವದ ಮಾತು ಶಿವಮಾರನು ಸೆರೆಮನೆಯಲ್ಲಿದ್ದಾಗ, ಆತನ ಮಗನಾದ ಮಾರಸಿಂಹನು ಗಂಗವಾಡಿಯನ್ನು ಆಳುತ್ತಿದ್ದನು ಗಂಗವಾಡಿಯು ಪೂರಾ ಗೋವಿಂದನ ವಶಕ್ಕೆ ಹೋಗಿರಲಿಲ್ಲ ಶಿವಮಾರನು ಬಿತ್ತಿದ ಸ್ವಾತಂತ್ರ್ಯದ ಬೀಜಗಳು ಆತನ ಕಾಲದಲ್ಲಿ ಪೂರ್ಣವಾಗಿ ಫಲಪ್ರದವಾಗಲಿಲ್ಲ ರಾಜಕಾರಣದ ಕತ್ತರಿಯಲ್ಲಿ ಸಿಕ್ಕು ಆತನನ್ನು ಮೇಲಿಂದ ಮೇಲೆ ಹಿಡಿಹಿಡಿಯುವುದು ನಡೆದಿತ್ತು ಆತನು ಸ್ವಾಭಿಮಾನ ಮೂರ್ತಿಯಾದುದರಿಂದ, ಸಂಕಟ ಸಮಯಗಳಲ್ಲಿಯೂ ಆತನು ಗೋವಿಂದನಿಗೆ ಬಗ್ಗಲಿಲ್ಲ ಇಷ್ಟೇ ಅಲ್ಲ, ಆ ಗೋವಿಂದನಿಂದಲೇ ಮೂರ್ಧಾಭಿಷಿಕ್ತನಾದನು ಶಿವಮಾರನ ಮರಣದ ನಂತರ ಆತನ ಮಗನ ಆಳಿಕೆಯಲ್ಲಿ ಗಂಗವಾಡಿಯು ರಾಷ್ಟ್ರಕೂಟರ ನೊಗವನ್ನು ಸಂಪೂರ್ಣವಾಗಿ ಚಿಮ್ಮಿ ಪೂರ್ಣವಾದ ಸ್ವಾತಂತ್ರ್ಯ ಸುಖವನ್ನನುಭವಿಸಿತು

ಗೋವಿಂದನು ಶಿವಮಾರನ ವಿಷಯವಾಗಿ ಯಾವಾಗಲೂ ಪೂಜ್ಯಭಾವವನ್ನು ತಾಳಿ ಆತನನ್ನು ಮೇಲಿಂದ ಮೇಲೆ ಬಿಟ್ಟುಕೊಡುವುದಕ್ಕೆ ಶಿವಮಾರನಲ್ಲಿರುವ ಅನೇಕ ಸದ್ಗುಣಗಳೂ ಕಾರಣವಾದಂತೆ ತೋರುತ್ತದೆ ಶಿವಮಾರನು ಸುಸಂಸ್ಕೃತನು, ವಿದ್ಯಾವಂತನು, ಕಲಾಪ್ರೇಮಿಯು, ಉತ್ಕೃಷ್ಟಕವಿಯು, ತರ್ಕಶಾಸ್ತ್ರನಿಪುಣನು, ನಾಟಕಪ್ರವೀಣನು,

ಗಜಶಾಸ್ತ್ರದಲ್ಲಿ ಘನಪಂಡಿತನು  ಇಂತಹ ಅಲೌಕಿಕವಾದ ಗುಣಗಳು ಶಿವಮಾರನಲ್ಲಿರುವವೆಂಬುದು ಗುಣಜ್ಞನಾದ ಗೋವಿಂದನಿಗೆ ಗೊತ್ತಿದ್ದ ಮೂಲಕವೇ ಶಿವಮಾರನು ಹಗೆತನಮಾಡಿದರೂ ಆತನ ವಿಷಯವಾಗಿ ಗೋವಿಂದನು ಯಾವಾಗಲೂ ಅದರ ಬುದ್ಧಿಯನ್ನು ತಾಳಿದ್ದನು

---

ಸುಭಟಚೂಡಾಮಣಿಯಾದ

# ಬೂತುಗರಾಯ

---

## (೯೩೮-೯೫೩)

ಕೆಲವರಿಗೆ ಸಾಹಸ ಕಾರ್ಯಗಳನ್ನು ಸದಾ ಮಾಡುತ್ತಿರುವುದೊಂದು ಚಟ. ಅವರಿಗೆ ಶಾಂತವಾದ ಜೀವನವು ಬೇಕಿಲ್ಲ. ತಮ್ಮ ತೋಳ್ತೀಂಡಿಯನ್ನು ತೀರಿಸುವುದಕ್ಕೆ ಎಷ್ಟು ಹೆಚ್ಚು ಸಂದರ್ಭಗಳು ಒದಗುವುವೊ ಅಷ್ಟು ಅವರಿಗೆ ಆನಂದ. ಇಂತಹ ಜನರು ಹುಟ್ಟಿದಂದಿನಿಂದ ಸಾಯುವವರೆಗೆ ಒಂದಿಲ್ಲೊಂದು ಎದೆಗಾರಿಕೆಯ ಕೆಲಸವನ್ನು ಮಾಡುವುದರಲ್ಲಿ ತೊಡಗಿರುತ್ತಾರೆ. ಅವರಿಗೆ ಅನಾಯಾಸವಾಗಿ ಅಂತಹ ಪ್ರಸಂಗಗಳೊದಗದಿದ್ದರೆ, ಅವರು ಅವುಗಳನ್ನು ಹುಡುಕಿ ತೆಗೆಯುತ್ತಾರೆ. ಕಲಿತನವನ್ನು ತೋರಿಸುವ ಯಾವ ಸಂಧಿಯನ್ನೂ ಅವರು ವ್ಯರ್ಥವಾಗಿ ಹೋಗಗೊಡುವುದಿಲ್ಲ. ಕಾಳಗವೆಂದೊಡನೆಯೆ ಅವರ ಮೈಯುಬ್ಬುತ್ತದೆ; ನೆತ್ತರು ಒತ್ತರದಿಂದ ಹರಿಯುತ್ತದೆ; ಆವೇಶ ತುಂಬುತ್ತದೆ; ತೇಜ ಮಿಂಚುತ್ತದೆ; ಉತ್ಸಾಹ ಕುಣಿಯುತ್ತದೆ. ರಾಷ್ಟ್ರಕೂಟ ಚಕ್ರವರ್ತಿಗಳ ಮಾಂಡಲಿಕನಾದ ಬೂತುಗನ ಜೀವಿತವು ಈ ಮಾದರಿಯದು.

ರಾಷ್ಟ್ರಕೂಟರು ಸುಮಾರು ೨೦೦ ವರ್ಷಗಳವರೆಗೆ ಅತಿಶಯವಾದ ಸಾಮ್ರಾಜ್ಯಸಂಪತ್ತನ್ನು ಅನುಭವಿಸುತ್ತ ಬಂದಿದ್ದರು. ಉತ್ತರದಲ್ಲಿ ನರ್ಮದೆಯಿಂದ ದಕ್ಷಿಣದಲ್ಲಿ ಕಾವೇರಿಯವರೆಗೆ ಅವರ ರಾಜ್ಯವಿಸ್ತಾರ. ಧ್ರುವ, ಗೋವಿಂದ, ನೃಪತುಂಗರಂತಹ ಪ್ರಖ್ಯಾತರಾದ ಕ್ಷತ್ರಿಯಶಿಖಾಮಣಿಗಳು ಹುಟ್ಟಿದ್ದರಿಂದ ರಾಷ್ಟ್ರಕೂಟರ ಕೀರ್ತಿಯು ಅಚ್ಚಳಿಯದೆ

ತೂಗಿ ಬೆಳಗಿತ್ತು. ಆದರೆ ಮಹಾ ವೃಕ್ಷವು ಮುದುಕವಾಗಿ ಒಮ್ಮೆ ಮುರಿದುಕೊಂಡು ಬೀಳಲೇ ಬೇಕಲ್ಲವೆ? ಸಾಮಾನ್ಯತಃ ಸಾಮ್ರಾಜ್ಯದ ಆಯುಷ್ಯವು ೨೦೦-೨೫೦ ವರುಷವಿದ್ದಂತೆ ತೋರುತ್ತದೆ. ಬಾದಾಮಿ ಚಾಳುಕ್ಯರ ಸಾಮ್ರಾಜ್ಯವು ಅಷ್ಟೇ ವರ್ಷ ಬಾಳಿತು. ಅವರ ತರುವಾಯದಲ್ಲಿ ಬಂದ ಈ ರಾಷ್ಟ್ರಕೂಟರೂ ಸುಮಾರು ಅಷ್ಟೇ ವರುಷ ಬದುಕಿದರು. ಗಂಗ ಮನೆತನದ ಬೂತುಗನ ಕಾಲವು ಈ ಪ್ರಕಾರದ ರಾಷ್ಟ್ರಕೂಟರ ಇಳಿಗಾಲದ ಪ್ರಾರಂಭದ ಕಾಲವು. ನಾಲ್ಕನೆಯ ಗೋವಿಂದನಂತಹ ದುರ್ವ್ಯಸನಿಗಳು ಹುಟ್ಟಿದುದರಿಂದ ರಾಷ್ಟ್ರಕೂಟ ಸಾಮ್ರಾಜ್ಯಲಕ್ಷ್ಮಿಯು ಹೊರಹೊರಡಲು ಸಿದ್ಧಳಾಗಿದ್ದಳು. ಆದರೆ ರಾಷ್ಟ್ರಕೂಟರ ಸುದೈವದಿಂದ ಬೂತುಗ ಮತ್ತು ಅವನ ಮಗ ಮಾರಸಿಂಹರಂತಹ ನಚ್ಚಿನವರಾದ ಬಲ್ಲಂಟರು ಆ ಸಾಮ್ರಾಜ್ಯವನ್ನು ಎತ್ತಿಹಿಡಿಯಲು ಪ್ರಯತ್ನಮಾಡಿದುದರಿಂದ, ರಾಷ್ಟ್ರಕೂಟರ ಪಟ್ಟವು ಮುಂದ ಕೆಲವು ವರುಷ ಜೀವ ಹಿಡಿದುಕೊಂಡಿತು.

ಗಂಗಮಂಡಲವನ್ನು ಆಳುತ್ತಿದ್ದ ಎರೆಯಪ್ಪನಿಗೆ ಇಬ್ಬರು ಮಕ್ಕಳು. ಮೊದಲನೆಯವ ರಾಚಮಲ್ಲ, ಎರಡನೆಯವ ಭೂತಯ್ಯ ಅಥವಾ ಬೂತುಗ. ಬೂತುಗನು ಸಾಹಸತುಂಗ, ತುಂಗಪರಾಕ್ರಮಿ. ರಾಚಮಲ್ಲ ಸಾಹಸಿಯೂ ಅಲ್ಲ, ಪರಾಕ್ರಮಿಯೂ ಅಲ್ಲ. ಬೂತುಗನು ತನ್ನ ದೋರ್ದರ್ಪದ ಪ್ರಭಾವದಿಂದ ರಾಷ್ಟ್ರಕೂಟ ಸಾರ್ವಭೌಮನಾದ ಬಡ್ಡಿಗನಿಗೆ ಬಲು ಪ್ರಿಯನಾಗಿದ್ದನು, ಆ ಪ್ರೀತಿಯ ಹೆಚ್ಚುಗೆಯಿಂದಲೇ ಇವನನ್ನು ಆ ಚಕ್ರವರ್ತಿಯು ಅಳಿಯನನ್ನಾಗಿ ಮಾಡಿಕೊಳ್ಳಲು ಮನಮಾಡಿದನು; ಮತ್ತು ತನ್ನ ಮಗಳಾದ ರೇವಕೆಯನ್ನು ಬೂತುಗನಿಗೆ ಧಾರೆಯೆರೆದು ಕೊಟ್ಟನು, ಪುರಿಗೆರೆ ಲಕ್ಷ್ಮೇಶ್ವರದ ಮೂರು ನೂರನ್ನೂ ಬೆಳವಲ ಮೂರು ನೂರನ್ನೂ ಕಿಸುಕಾಡ ಎಪ್ಪತ್ತನ್ನೂ ಬಾಗೆನಾಡ ಎಪ್ಪತ್ತನ್ನೂ ಎಂದರೆ ಈಗಿನ ಧಾರವಾಡ, ಬೆಳಗಾವಿ, ವಿಜಾಪುರ ಜಿಲ್ಲೆಗಳನ್ನು ವರದಕ್ಷಿಣೆಯಾಗಿತ್ತನು. ಈ ಶರೀರಸಂಬಂಧದಿಂದ ಚಕ್ರವರ್ತಿ ಮನೆತನಕ್ಕೆ ಬೂತುಗನ ಬಳಕೆಯು ಹೆಚ್ಚಾಯಿತು. ಬಡ್ಡಿಗನ ಮಗನಾದ ಕೃಷ್ಣನಿಗೂ

ಬೂತುಗನಿಗೂ ನಿಕಟವಾದ ಸ್ನೇಹವು ಬೆಳೆಯಿತು ಮೂವನ ಮರಣದ ಬಳಿಕಂತೂ ಬೂತುಗನು ರಾಜನಾದ ಕೃಷ್ಣನ ಬಲಗೈಯೇ ಆದನು. ಹೀಗೆ ಮಾಂಡಲಿಕರ ಮಗನಾದ ಬೂತುಗನು ತನ್ನ ನಿಜಭುಜೋನ್ನತಿಯಿಂದ ಉನ್ನತ ಯೋಗ್ಯತಾ ಸಂಪನ್ನನಾದನು

ಬೂತುಗನು ರಾಜಾಶ್ರಯವನ್ನು ಪಡೆದುದಲ್ಲದೆ ಜನರ ಬಲವನ್ನೂ ಸಂಪಾದಿಸಿದನು ಇವನ ಗುಣಾತಿಶಯದ ಮೂಲಕ ಪ್ರಜೆಗಳೆಲ್ಲ ಇವನನ್ನು ನನ್ನಿಯ ಗಂಗನೆಂದೂ ಗಂಗ ಗಾಂಗೇಯನೆಂದೂ ಪ್ರೀತಿಯಿಂದ ಕರೆಯುತ್ತಿದ್ದರು ಬೂತಗನು ನಿಜವಾಗಿಯೂ ರಣರಂಗಗಾಂಗೇಯನಾಗಿದ್ದನು ಇವನ ಅಣ್ಣನಾದ ರಾಚಮಲ್ಲನು ಗಂಗಮಂಡಲವನ್ನಾಳುತ್ತಿದ್ದುದು ಸಾಮ್ರಾಜ್ಯಕ್ಕೆ ಹಿತಕರವಾಗಿದ್ದಿಲ್ಲ ಅಲ್ಲದೆ ತನ್ನ ಬೀಗನಾದ ಬೂತುಗನಿಗೇ ಆಸ್ಥಾನವು ದೊರೆಯುವುದು ಶ್ರೇಯಸ್ಕರವೆಂದು ರಾಷ್ಟ್ರಕೂಟ ಕೃಷ್ಣನ ವಿಚಾರ ಬೂತುಗನೂ ಈ ಮಾನಕ್ಕ ತಕ್ಕ ಮಲ್ಲನಾಗಿದ್ದನು ಆದುದರಿಂದ ರಾಚಮಲ್ಲನೆಂಬ ವಿಷವೃಕ್ಷವನ್ನು ಕಿತ್ತೊಗೆದು ಬೂತರಾಯನೆಂಬ ಕಲ್ಪವೃಕ್ಷವನ್ನು ನೆಡಲಿಕ್ಕೆ ಕೃಷ್ಣರಾಜನು ಪ್ರಯತ್ನಿಸಿದನು ಬೀಗನ ಸಹಾಯದಿಂದ ಬೂತುಗನು ಅಣ್ಣನನ್ನು ಸ್ವರ್ಗಲೋಕಕ್ಕೆ ಕಳುಹಿಸಿ ತಾನು ಗಂಗಮಂಡಲದ ಒಡೆಯನಾದನು

ಇತಿಹಾಸವನ್ನವಲೋಕಿಸಿದರೆ ಒಬ್ಬ ರಾಜನು ತೀರಿ ಇನ್ನೊಬ್ಬನು ಪಟ್ಟವೇರುವುದೊಂದು ಸಾಮ್ರಾಜ್ಯಕ್ಕೆ ಕುತ್ತಿನ ಪ್ರಸಂಗವೆಂದು ಹೇಳಬಹುದು ಹಾಗೆಯೇ ಬದ್ದಿಗನು ಮಡಿದು ಕೃಷ್ಣನು ರಾಜನಾದಾಗ ಒಂದು ಕಂಟಕವು ಸಂಭವಿಸಿತು ಆ ಕಂಟಕವೇ ಲಲ್ಲಿಯನೆಂಬ ಪುಂಡುಗಾರ ಕೃಷ್ಣನು ನಿಜವಾದ ಪಟ್ಟಬಾಧ್ಯನಲ್ಲವೆಂದೂ ತಾನೇ ಅರಸನಾಗಲು ಯೋಗ್ಯ ಗೋತ್ರಜನೆಂದೂ ಸಾರುತ್ತ ಲಲ್ಲಿಯನು ಬೊಬ್ಬಿರಿದು ಬಂದನು ಆದರೆ ಕೃಷ್ಣನಿಗೆ ಬೂತುಗನೆಂಬ ಕಾಲಭೈರವನ ಬೆಂಬಲವಿದ್ದುದು ಆ ಮದಾಂಧನಿಗೆ ಕಾಣಿಸಲಿಲ್ಲ ಬೂತುಗನು ಸೈನ್ಯದೊಂದಿಗೆ ಲಲ್ಲಿಯನನ್ನು ಇದಿರುಗೊಂಡನು ಅವಘಡಿಸಿದ ಅಹಂಕಾರದಿಂದ ಲಲ್ಲಿಯನು ಬೂತು

ಗನ ಮೇಲೆ ಬಿದ್ದನು ಇಬ್ಬರ ಸೇನೆಗಳೂ ಬಿನ್ನಣದಿಂದ ತೊಡರಿಕೊಂಡುವು ಕೈದುಡುಕಿನಿಂದ ಕಾದಿದವು ಒಂದೆ ಮೈಯಲ್ಲಿ ಹೆಣೆದಿರಿಯಲಾಗಿ, ರಕ್ತದ ಕಡಲು ಹರಿಯಿತು ಉಭಯ ಸೈನಿಕರು ವೀರಾವೇಶದಿಂದ ಹೊಡೆದಾಡಿದರು ಲಲ್ಲಿಯನ ಚೆಲ್ಲಾಟವು ತಗ್ಗಿತು. ಆತನು ದೆಸೆಗೆಟ್ಟು ಓಡಿ ಹೋದನು ಬೂತುಗನು ಈ ಬಗೆಯಾಗಿ ತನ್ನ ಬೀಗನಾದ ಕೃಷ್ಣನಿಗೆ ರಾಜಪದವಿಯನ್ನು ಸ್ಥಿರಪಡಿಸಿ ಆತನ ಉಪಕಾರವನ್ನು ತೀರಿಸಿದನು.

ದಕ್ಷಿಣದಲ್ಲಿ ಆಗ ಪಲ್ಲವರ ನೆಲೆಗೆಡಿಸಿ ಚೋಳರು ಹೆಚ್ಚಳವನ್ನು ಪಡೆಯುತ್ತಿದ್ದರು. ಚೋಳೇಂದ್ರನಾದ ರಾಜಾದಿತ್ಯನು ಸುತ್ತುಮುತ್ತಲಿನ ರಾಜರನ್ನೊತ್ತಿ ತನ್ನ ರಾಜ್ಯವನ್ನು ವಿಸ್ತೃತಗೊಳಿಸಲು ಹವಣಿಸುತ್ತಿದ್ದನು. ಚೋಳರಾಜ್ಯಕ್ಕೂ ರಾಷ್ಟ್ರಕೂಟ ರಾಜ್ಯಕ್ಕೂ ನಡುವೆ ಗಂಗಮಂಡಲವಿತ್ತು. ಆದುದರಿಂದ ಚೋಳನ ಆಘಾತಗಳು ರಾಷ್ಟ್ರಕೂಟರ ಮೇರೆಗೆ ಹೊಂದಿರುವ ಗಂಗರ ಮೇಲೆ ಉಂಟಾಗುತ್ತಿದ್ದುವು! ಇವುಗಳನ್ನು ತಡೆವ ಸುಸಂಧಿಯು ತನಗೆ ದೊರೆತುದಕ್ಕಾಗಿ ಬೂತುಗನಿಗೆ ಆನಂದವಾಯಿತು ಆತನೂ ಆತನ ಬೀಗನೂ ಸೇರಿ ರಣಭೇರಿಯನ್ನು ಹೊಯ್ಸಿದರು. ಅರ್ಕೋಣದ ಹತ್ತಿರವಿರುವ ತಕ್ಕೋಳದ ನೆರೆಯಲ್ಲಿ ರಾಜಾದಿತ್ಯನ ಸೇನಾಸಾಗರವು ಹಬ್ಬಿಕೊಂಡಿತ್ತು, ಗಂಗಬೂತುಗನೂ ರಾಷ್ಟ್ರಕೂಟ ಕೃಷ್ಣನೂ ಅಲ್ಲಿಗೆ ಬಲವೆತ್ತಿ ಭೋರನೆ ಹೋಗಿ ಆ ಸೈನ್ಯದ ಮೇಲೆ ಬರಿಸಿಡಿಲುಗಳಂತೆರಗಿದರು ರಾಷ್ಟ್ರಕೂಟರ ಪಕ್ಷದವನಾದ ಮಣಲೇರನೆಂಬ ತಡುಗಲಿಯು ಕಡುಭಯಂಕರವಾಗಿ ಹೋರಾಡಿದನು ವೈರಿ ಬಲವೂ ಕೂಡ ಇವನನ್ನು ಸಗರತ್ರಿನೇತ್ರನೆಂದು ಕೊಂಡಾಡಿತು ಬೂತುಗನೂ ಕೃತಾಂತನಂತೆ ಚೋಳ ದಳವನ್ನು ಹೊಕ್ಕನು ಎದೆಗೆ ಇದಿರಾತು ಬರುವ ಚತುರಂಗ ಬಲಗಳನ್ನು ಅಟ್ಟಿ ಮುಟ್ಟಿತಳ್ತಿರಿದನು, ಇದಿರಿಸುವ ಗಂಡರನ್ನು ತಾನೊಬ್ಬನೇ ತುರುಗುವೆನೆಂದು ಮುಂಬರಿದು ಬರುವ ಬೀರರನ್ನು ಚೋಳನ ಸಾಕ್ಷಿಯಾಗಿಯೇ ದಿಂಡುಗೆಡವಿದನು, ಬೂತುಗನು ತನ್ನ ಕೂರಾದ ಕರವಾಳದಿಂದ ಹಾದಿಯನ್ನು ಮಾಡಿಕೊಳ್ಳುತ್ತ ಚೋಳನ

ಪಡೆಯ ಬಸಿರೊಳಗೆ ಹೊಕ್ಕನು, ರಾಜಾದಿತ್ಯನು ಕುಳಿತ ಆನೆಯು ಆತನನ್ನು ಮಾರ್ಕೊಂಡಿತು, ಬೂತುಗನಿಗೆ ಹಬ್ಬವಾದಂತಾಯಿತು, ಚೋಳನನ್ನು ಬಳಸಿ ಬರುವ ಕಟ್ಟಾಳುಗಳನ್ನು ಆತನು ಘೊಕ್ಕನ ಕುತ್ತಿ ಕೆಡಹಿದನು ಆ ರಣರಂಗದಲ್ಲಿ ಉರವಣೆಯಿಂದ ಇದಿರಾದ ಸುರಿಗೆಕಾರರನ್ನು ತೆರಪಿಲ್ಲದ ಕೊಂದು ಬೂತುಗನು ಭೂತಭೋಜನವನ್ನು ಮಾಡಿಸಿದನು ಬೂತುಗನು ಟಣ್ಣನ ಅಂಬಾರಿಗೆ ನೆಗೆದು ರಾಜಾದಿತ್ಯನನ್ನು ಕಂಕುಳಲ್ಲಿ ಔತುಕೊಂಡು ಕೆಳಗೆ ಜಿಗಿದನು, ಇಬ್ಬರಿಗೂ ಅತ್ಯದ್ಭುತವಾದ ದ್ವಂದ್ವ ಯುದ್ಧವಾಯಿತು, ದೂರದಿಂದ ಇದನ್ನೆಲ್ಲ ನೋಡಿದ ರಾಷ್ಟ್ರಕೂಟ ಕೃಷ್ಣನು ಹರ್ಷಪರವಶನಾಗಿ “ನಿನ್ನಂತಹ ರಣರಂಗಸಿಂಗರುಂಟೆ! ನಿನ್ನಂಥವನು ನೀನೇ!” ಎಂದು ಹೊಗಳಿದನು, ಸೈನ್ಯವೆಲ್ಲವೂ ಒಂದೇ ಕೊರಳಿನಿಂದ ಅದನ್ನೇ ಮತ್ತೆ ಗರ್ಜಿಸಿತು! ಬೂತುಗನ ವೀರಾವೇಶವು ಇಮ್ಮಡಿಸಿ ಮುಮ್ಮಡಿಸಿ ನಾಲ್ಮಡಿಸಿತು ಆತನು ಹಿಂದು ಮುಂದಕ್ಕೆ ಹಾರಿ, ಎಡಬಲಕ್ಕೆ ಸರಿದು, ನೆಲಕ್ಕೆ ರಾವಿ, ಗಗನಕ್ಕೆ ನೆಗೆದು, ಹಗೆಯ ಹೊಡೆತವನ್ನು ತಪ್ಪಿಸಿ, ಖಡ್ಗದಿಂದಪ್ಪಳಿಸಿ, ಥಾಲನ್ನಾಡ್ಡಿ, ತಿವಿದು ರಿಪುಶಿರವನ್ನು ಇಳುಹಿದನು, ಹೀಗೆ ಬೂತುಗನು ತನ್ನ ಶೌರ್ಯದಿಂದ ಅದ್ವಿತೀಯವಾದ ವಿಜಯವನ್ನು ರಾಷ್ಟ್ರಕೂಟ ಕೃಷ್ಣನಿಗೆ ತಂದು ಕೊಟ್ಟನು ಇದರಿಂದ ಸಂತುಷ್ಟನಾದ ಕೃಷ್ಣನು ಆತನಿಗೆ ಬನವಾಸಿ ನಾಡನ್ನು ಉಂಬಳಿಯಾಗಿ ಕೊಟ್ಟನು

ಈ ವಿಜಯವಾದ ಬಳಿಕ ಅವರು ತಂಜಾವರವನ್ನು ಮುತ್ತಿದರು. ಅಲ್ಲಿಯೂ ಈ ಬೂತುಗನೇ ಕದನಕ್ಕೆ ಮುಂದಾಳು ಹೆಚ್ಚೇನು? ರಾಷ್ಟ್ರಕೂಟರು ಪರರಾಯರೊಡನೆ ಮಾಡಿದ ಯುದ್ಧಗಳೆಲ್ಲ ಇವನ ಬಲದಿಂದಲೇ, ಜಯಗಳೆಲ್ಲ ಇವನ ದೋರ್ದರ್ಪದ ಫಲಗಳೇ ತಂಜಾವರದರಸು ಸೋತನು ಆಮೇಲೆ ಅವರಿಬ್ಬರು ಪಲ್ಲವರ ಮೇಲೆ ಕೈ ಮಾಡಿದರು, ಪಲ್ಲವರ ರಾಜಧಾನಿಯಾದ ಕಂಚಿಯನ್ನು ಮುತ್ತಿದರು, ಕಾಳಗದಲ್ಲಿ ಪಲ್ಲವರ ಬಿಂಕವಡಗಿತು ಪಲ್ಲವೇಂದ್ರನಾದ ಅಣ್ಣಿಗನು ಹಣ್ಣು ಹಣ್ಣಾದನು, ಕಂಚಿಯು ಕೈ ಸೇರಿತು, ಆವರ ಪಲ್ಲವೇಂದ್ರನು ರಾಷ್ಟ್ರಕೂಟರ

ಮಾಂಡಲಿಕನಾಗಿರಲು ಒಪ್ಪಿಕೊಂಡುದರಿಂದ ಕೃಷ್ಣನು ಆತನಿಗೆ ತಿರುಗಿ ಕಂಚಿಮಂಡಲವನ್ನೊಪ್ಪಿಸಿದನು ತಮ್ಮ ವಿಜಯಧ್ವಜವನ್ನು ಮೆರೆಯಿಸುತ್ತ ಬೂತುಗ ಕೃಷ್ಣರು ಮಳಖೇಡಕ್ಕೆ ಬಂದರು

ಬೂತುಗನ ಇನ್ನೊಂದು ಮಹತ್ವದ ಕಾಳೆಗವೆಂದರ ಚೇದಿಯ ಕಲಚೂರ್ಯರಿಗೆ ನೆರವಾದುದು ಗುರ್ಜರಾಧವನ್ನಾಳುತ್ತಿದ್ದ ಚಾಲುಕ್ಯ ವಂಶದ ಮೂಲರಾಜನು ಕಲಚುರಿಯರ ಕಾಲಂಜರ, ಚಿತ್ರಕೂಟ ಎಂಬ ರಡು ಮುಖ್ಯ ಕೋಟೆಗಳನ್ನು ಮುತ್ತಿದನು ಕಲಚುರಿಯರಸನು ಸಹಾಯಕ್ಕಾಗಿ ಕೃಷ್ಣನನ್ನು ಬೇಡಿಕೊಂಡನು ಕೃಷ್ಣನು ಬೂತುಗನನ್ನೂ ಅವನ ಮಗನಾದ ಮಾರಸಿಂಹನನ್ನೂ ದೊಡ್ಡ ದಂಡಿನೊಡನೆ ಕಳುಹಿದನು ಒಳಗಿನವರೊಡನೆ ಕಾದಾಡುತ್ತಿದ್ದ ಚಾಳುಕ್ಯರ ಕಟಕವನ್ನು ಬೂತುಗನ ದಂಡಾಳುಗಳು ಹೊರಗಿನಿಂದ ಲಗ್ಗೆಯಿಟ್ಟರು ಎರಡೂ ಕಡೆಯಿಂದ ಬರುವ ಕಡಲ ತೆರೆಗಳ ಹೊಯ್ತಕ್ಕೆ ಚಾಳುಕ್ಯ ಸೇನೆಯು ನುಗ್ಗುನುಗ್ಗಾಗತೊಡಗಿತು ಬೂತುಗನು ಇದಿರು ಬಂದವರನ್ನು ಚದರುತ್ತ ಚದರುತ್ತ ಒತ್ತೊತ್ತಿ ಮುಂದಕ್ಕೆ ಹೋಗಿ, ಕರಿತುರಗವೀರಭಟರನ್ನು ಉರವಣೆಯಿಂದ ಗೆದ್ದನು ಆ ಹೊಯ್ಲಿನಲ್ಲಿ ಮೂಲರಾಜನ ಶೌರ್ಯೋತ್ಸಾಹಗಳನ್ನು ನಿರ್ಮೂಲನಮಾಡಿದನು ಮೂಲರಾಜನು ಮುತ್ತಿಗೆಯನ್ನು ಕಿತ್ತುಕೊಂಡು ಮರಳಿದನು ಬೂತುಗನು ಆತನಿಂದ ತಪ್ಪು ಕಾಣಿಕೆಗಳನ್ನು ಸುಲಿದುಕೊಂಡನು ಅಲ್ಲಿಂದ ಆತನು ಸಪ್ತಮಾಳವ ದೇಶಗಳನ್ನು ಗೆದ್ದು ಅದರ ಮೇರೆಯನ್ನು ಗೊತ್ತುಪಡಿಸಿದನು ಅಲ್ಲಿ ಸೀಮೆಯ ಗುರುತಿನ ಕಲ್ಲುಗಳನ್ನು ನಿಲ್ಲಿಸಿ, ಆ ದೇಶಕ್ಕೆ "ಮಾಳವಗಂಗ" ಎಂಬುದಾಗಿ ತನ್ನ ಮನೆತನದ ಕುರುಹಿನ ಹೆಸರನ್ನು ಕೊಟ್ಟನು

ಈ ಬಗೆಯಾಗಿ ಬೂತುಗನ ಚರಿತ್ರೆಯು ವಿಲಕ್ಷಣವಾದ ಅಘಟಿತನದಿಂದಲೂ ಸಾಹಸದಿಂದಲೂ ತುಂಬಿದೆ ಈತನ ಮಗನಾದ ಮಾರಸಿಂಹನೂ ಈತನೂ ಕೂಡಿ ಮುಳುಗುವ ರಾಷ್ಟ್ರಕೂಟರ ಸಾಮ್ರಾಜ್ಯವನ್ನು ಬದುಕಿಸಿದ್ದೇನೋ ನಿಜ ಆದರ ಆ ಸಾಮ್ರಾಜ್ಯವು ಮುಂದೆ ೩೦

ವರುಷ ಕೂಡ ಬದುಕಲಿಲ್ಲ. ಅದು ಪಶ್ಚಿಮ ಚಾಲುಕ್ಯರಿಗೆ ಪುನಃ ತುತ್ತಾಯಿತು. ಕಾಲನ ಹೊಟ್ಟೆಯೊಳಗಿನ ಗುಟ್ಟನ್ನು ಕಂಡುಹಿಡಿದವರಾರು? ರಾಷ್ಟ್ರಕೂಟ ವಂಶವು ಅಸ್ತಂಗತವಾದುದಲ್ಲದೆ ಗಂಗವಂಶವು ಕೂಡ ಅದ ಕೊಡನೆಯೆ ಅದೇ ಸುಮಾರಿಗೆ ಪ್ರಬಲರಾಗುತ್ತಿದ್ದ ಚೋಳರಸರಿಂದ ನುಂಗಲ್ಪಟ್ಟು ಪೂರಾನಾಮಶೇಷವಾಗಿ ಹೋಯಿತು. ಹೀಗೆ ೧೦ ನೆಯ ಶತಮಾನದ ಕೊನೆಯ ಸುಮಾರಕ್ಕೆ ಏಕಕಾಲಕ್ಕೆ ಎರಡೂ ಕುಪ್ಪಳಿಸಿ ಕೊಂಡು ಬಿದ್ದವು.



## ನಿಜಭುಜ ಚಕ್ರವರ್ತಿಯಾದ

# ನೂರ್ಮಡಿ ತೈಲಪ

---

## (೯೭೩-೯೯೭)

ಕನ್ನಡ ಸಾರಸ್ವತಕ್ಕೆ ಉಕ್ಕು ಬಂದಕಾಲ ಕರ್ಣಾಟಕದೇವಿಯು ಕನ್ನಡ ವಾಙ್ಮಯದ ರತ್ನತ್ರಯರಾದ ಪಂಪಪೊನ್ನರನ್ನರಂತಹ ಕವಿ ಚಕ್ರವರ್ತಿಗಳನ್ನು ಹೆತ್ತಕಾಲ ಇಂತಹ ಕಾಲದಲ್ಲಿ ತೈಲಪನೆಂಬೊಬ್ಬ ಮಹಾಪುರುಷನು ಬಾದಾಮಿಯ ಚಾಳುಕ್ಯವಂಶದಲ್ಲಿ ಜನ್ಮ ತಾಳಿದನು. ಬಾದಾಮಿಯ ಚಾಳುಕ್ಯರು ಎರಡು ನೂರು ವರುಷ ವೈಭವದಿಂದಾಳಿ ರಾಷ್ಟ್ರಕೂಟರಿಂದ ಗ್ರಸ್ತರಾಗಿ ಹೋಗಿದ್ದರೂ ಚಾಳುಕ್ಯರ ಮೂರು ನಾಲ್ಕು ಮನೆತನಗಳು ಅಲ್ಲಲ್ಲಿ ಟುಕುಟುಕು ಜೀವ ಹಿಡಿದುಕೊಂಡಿದ್ದವು ಅವುಗಳಲ್ಲಿಯ ಒಂದರಲ್ಲಿ ತೈಲಪನ ಜನನ

ತೈಲಪನು ಉದಯವಾದಾಗ ವಾಙ್ಮಯಸ್ಥಿತಿಯು ಉಚ್ಚವಾಗಿದ್ದರೂ ರಾಜಕೀಯ ಸ್ಥಿತಿಯು ತೀರ ನಿಕೃಷ್ಟವಾಗಿತ್ತು ಚಾಳುಕ್ಯರ ಸ್ಥಾನವನ್ನಾಕ್ರಮಿಸಿದ ರಾಷ್ಟ್ರಕೂಟ ದೊರೆಗಳು ಎರಡು ನೂರು ವರ್ಷ ಆಳಿ ಮುಪ್ಪಿಗೆ ಬಂದಿದ್ದರು ಆ ಮನೆತನದ ಕೊನೆಯ ಅರಸರು ಅಲ್ಪಾಯುಷಿಗಳೂ ನಿರ್ವೀರ್ಯರೂ ಆಗಿದ್ದರು ಅವರ ಮಾಂಡಲಿಕರು ಪ್ರಬಲರಾಗಿ ಸ್ವತಂತ್ರರಾಗುವ ಹವಣಿಕೆಯಲ್ಲಿದ್ದರು ಸಾಮ್ರಾಜ್ಯದ ಹೊರಗಿನ ಶತ್ರುಗಳು ಈ ಸಂಧಿಯನ್ನು ಸಾಧಿಸಿ ರಾಷ್ಟ್ರಕೂಟರನ್ನು ಹಣ್ಣಿಗೆ ತಂದರು ಪರಮಾರ ಸಿಯಾಕವರ್ಷನೆಂಬ ಮಾಳವೆಯ ಒಡೆಯನು

ರಾಷ್ಟ್ರಕೂಟ ಕೊಟ್ಟಿಗನನ್ನು ಜಯಿಸಿ ಆತನ ಸಂಪತ್ತನ್ನು ಹರಣಮಾಡಿದನು. ಆತನ ಮಗನಾದ ಪರಮಾರಮುಂಜನು ದೊಡ್ಡ ಸೈನ್ಯದೊಂದಿಗೆ ಕರ್ನಾಟಕದ ಮೇಲೆ ದಂಡೆತ್ತಿ ಬಂದು ರಾಷ್ಟ್ರಕೂಟರ ರಾಜಧಾನಿಯಾದ ಮಳಖೇಡವನ್ನು ಮುತ್ತಿ ಸೂರೆಗೊಂಡನು. ಈ ರೀತಿಯಾಗಿ ರಾಷ್ಟ್ರಕೂಟ ವಂಶಕ್ಕೆ ಕ್ಷಯರೋಗವು ಹತ್ತಿತ್ತು. ಇಂತಹ ಗಂಡಾಂತರ ಸಮಯದಲ್ಲಿ ಕರ್ನಾಟಕದೊಳಗ ತೈಲಪನಂತಹ ಶೌರ್ಯನಿಕೇತನನು ಹುಟ್ಟದಿದ್ದರೆ ಕರ್ನಾಟಕವು ಮಾಳವೆಯರ ಪಾಲಾಗಬಹುದಾಗಿತ್ತು. ಈ ಇಕ್ಕಟ್ಟಿನ ಸಮಯದಲ್ಲಿ ತೈಲಪನು ಕರ್ನಾಟಕವನ್ನು ಉಳಿಸಿದನು.

ಬಾದಾಮಿಯ ಚಾಲುಕ್ಯರ ಕೆಲವು ಶಾಖೆಗಳು ಅಲ್ಲಲ್ಲಿ ಬೇರೂರಿ ಕೊಂಡು ನಿಂತಿದ್ದವೆಂದು ಹೇಳಿದೆವಷ್ಟೆ. ಈ ಚಾಲುಕ್ಯರಲ್ಲಿ ತಮ್ಮ ಪೂರ್ವ ವೈಭವಸ್ಮರಣೆಯು ನಷ್ಟವಾಗಿರಲಿಲ್ಲ. ಒಮ್ಮೆ ವೈಭವದಲ್ಲಿ ಬಳೆದವರು ಆ ವೈಭವವನ್ನು ಮರೆವುದೆಂತು? ತಾವು ಸಾರ್ವಭೌಮತ್ವವನ್ನು ಕಳೆದು ಕೊಂಡೆವೆಂಬ ಕಲ್ಪನೆಯು ಅವರ ಮನಸ್ಸನ್ನು ಸಣ್ಣಾಗಿ ಸುಡುತ್ತಿತ್ತು. ಪಾರತಂತ್ರ್ಯಪಂಕದಲ್ಲಿ ಅವರು ಹಗಲಿರುಳು ತೊಳಲಾಡುತ್ತಿದ್ದರು. ಆದರೆ ಮಾಡುವುದೇನು? ಯಾವುದಕ್ಕೂ ಕಾಲ ಒದಗಿಬರಬೇಕಲ್ಲವೆ? ಶತ್ರುಗಳ ದುರ್ಬಲತೆಯೂ ತಮ್ಮ ವೀರ್ಯವೂ ಕೂಡಿಬರಬೇಕಲ್ಲವೆ? ಅಂತಹ ಯೋಗವು ೯೭೩ ನಯ ಇಸ್ವಿಯಲ್ಲಿ ಕೂಡಿ ಬಂದಿತು. ಆ ಯೋಗದ ಲಾಭವನ್ನು ತೆಗೆದುಕೊಂಡು ತೈಲಪನು ಮತ್ತೆ ಚಾಳುಕ್ಯ ವಂಶವನ್ನು ಸ್ಥಾಪಿಸಿದನು.

ಕರ್ನಾಟಕದ ವೈಭವದ ಇತಿಹಾಸವೆಂದರ ಮುಖ್ಯತಃ ಈ ಚಾಳುಕ್ಯ ರಾಷ್ಟ್ರಕೂಟ ಮನೆತನಗಳ ಇತಿಹಾಸ. ಇವರಿಬ್ಬರಲ್ಲಿಯೂ ಒಂದು ಬಗೆಯ ಮಲ್ಲಯುದ್ಧವು ನಡೆದಿತ್ತೆಂದು ಹೇಳಬಹುದು. ನಾಲ್ಕನಯ ಶತಮಾನದ ಕೊನೆಯಲ್ಲಿ ಚಾಳುಕ್ಯರ ಜಯಸಿಂಹನೆಂಬ ಅರಸನು ರಾಷ್ಟ್ರಕೂಟರ ಇಂದ್ರನನ್ನು ಸೋಲಿಸಿ, ಪಲ್ಲವರನ್ನು ಗೆದ್ದು ಚಾಳುಕ್ಯಸಾಮ್ರಾಜ್ಯದ ತಳಹದಿಯನ್ನು ಹಾಕಿದನು. ಬಾದಾಮಿಯ ಚಾಳುಕ್ಯರು ಎರಡು ನೂರು

ವರುಷ ಆಳಿದ ಬಳಿಕ, ರಾಷ್ಟ್ರಕೂಟರ ದಂತಿವರ್ಮನು ಚಾಲುಕ್ಯರನ್ನು ಮುರಿದೊತ್ತಿ ರಾಷ್ಟ್ರಕೂಟರ ವಿಜಯಧ್ವಜವನ್ನು ಎತ್ತಿ ಹಿಡಿದನು ಪುನಃ ಎರಡು ನೂರು ವರುಷಗಳಾದ ಬಳಿಕ, ಚಾಲುಕ್ಯರು ರಾಷ್ಟ್ರಕೂಟರನ್ನು ಎತ್ತಿ ಒಗೆದು ಎದೆಯಮೇಲೆ ಕುಳಿತುಕೊಂಡರು ಹೀಗೆ ಎರಡನೆಯ ಸಲ ಚಾಲುಕ್ಯಸಾಮ್ರಾಜ್ಯವನ್ನು ಸ್ಥಾಪಿಸಿದ ಶ್ರೇಯವು ನಮ್ಮ ತೈಲಪನಿಗೆ ಇರುತ್ತದೆ ಮತ್ತೊಂದು ವಿಶೇಷವೇನಂದರೆ, ರಾಷ್ಟ್ರಕೂಟರ ದಂತಿವರ್ಮನು ಚಾಳುಕ್ಯರ ಅಳಿಯನಾಗಿದ್ದು ಆ ಅಳಿಯತನದ ಲಾಭವನ್ನು ತೆಗೆದುಕೊಂಡು ರಾಷ್ಟ್ರಕೂಟ ಸಾಮ್ರಾಜ್ಯವನ್ನು ನಲೆಗೊಳಿಸಿದನು ಅದೇ ಮೇರೆಗೆ ತೈಲಪನಾದರೂ ರಾಷ್ಟ್ರಕೂಟ ರಾಜನಾದ ಕಕ್ಕಲನ ಅಳಿಯನಾದುದರಿಂದಲೇ ಆತನಿಗೆ ಚಾಳುಕ್ಯ ಸಾಮ್ರಾಜ್ಯವನ್ನು ಉದ್ಧರಿಸಲಿಕ್ಕೆ ಅನುಕೂಲವಾಯಿತು

ಮಳಖೇಡವು ಮಾಳವೆಯರಿಂದ ಹಾಳಾದ ಕಾಲದಿಂದ ರಾಷ್ಟ್ರಕೂಟ ಮನೆತನದಲ್ಲಿ ಶಾಂತಿ ಇದ್ದಿಲ್ಲ ಕೊಟ್ಟಿಗನ ತರುವಾಯ ತೈಲಪನ ಮಾವನಾದ ಕಕ್ಕಲನು ಪಟ್ಟವೇರಿದನು ಕಕ್ಕಲನ ಮಗಳಾದ ಜಾಕವ್ವೆ ಅಥವಾ ಜಾಕಲಾದೇವಿಯು ತೈಲಪನ ಹೆಂಡತಿ ಮಾವನಾದ ಕಕ್ಕಲನಲ್ಲಿ ರಾಷ್ಟ್ರಕೂಟ ಮನೆತನವನ್ನು ಉಳಿಸಿಕೊಳ್ಳುವ ಶಕ್ತಿಯಿಲ್ಲವೆಂಬುದನ್ನು ಮನಗಂಡೊಡನೆಯೆ ತೈಲಪನು ಅದನ್ನು ತಾನು ಸೆಳೆದುಕೊಂಡು ಅರಸನಾದನು ಸವದತ್ತಿಯಲ್ಲಿಯೂ ಬೆಳಗಾವಿಯಲ್ಲಿಯೂ ಕೆಲವು ರಟ್ಟರ ಮನೆತನಗಳಿದ್ದವು ಆ ಮನೆತನಗಳ ಅರಸರೂ ಮಳಖೇಡದ ಪಟ್ಟವನ್ನು ಕಾಯುವುದಕ್ಕೆ ಹವಣಿಸಿದರು ಅಲ್ಲದೆ ಗಂಗರ ಅರಸನಾದ ಮಾರಸಿಂಹನೂ ರಾಷ್ಟ್ರಕೂಟರ ಪಕ್ಷವನ್ನು ಹಿಡಿದನು ತೈಲಪನು ತನ್ನ ಮಾವನಿಂದ ಪಟ್ಟವನ್ನು ಕಸಿದುಕೊಂಡು ಮಳಖೇಡದಲ್ಲಿ ಪಟ್ಟವೇರಿದ ಕೂಡಲೆ ಮಾರಸಿಂಹನು ತನ್ನ ಸೋದರಳಿಯನಾದ ರಾಷ್ಟ್ರಕೂಟ ಮನೆತನದ ಇಂದ್ರನನ್ನು ತಾನು ಪಟ್ಟಕ್ಕೆ ಕುಳ್ಳಿರಿಸಿ, ಆತನು ರಾಷ್ಟ್ರಕೂಟರ ಸಾರ್ವಭೌಮನೆಂದು ಸಾರಿದನು ಮಾರಸಿಂಹನು ಬಹಳ ಶೂರನು, ನೊಳಂಬ ಕುಲವನ್ನು ನಾಶಪಡಿಸಿ ನೊಳಂಬ ಕುಲಾಂತಕನೆಂದು ಹೆಸರು

ಗೊಂಡವನು. ಇಂತಹ ಪರಾಕ್ರಮಶಾಲಿಯಾದವನು ರಾಷ್ಟ್ರಕೂಟರ ಇಂದ್ರನಿಗೆ ಬೆಂಬಲವಾಗಿ ನಿಂತುದರಿಂದ ಆತನಿಗೆ ಮಹದಾಶೆ ಹುಟ್ಟಿತು ತೈಲಪನಿಗೂ ಮಾರಸಿಂಹನಿಗೂ ಬನವಾಸಿಯ ಸೀಮೆಯಲ್ಲಿ ಕದನವಾಯಿತು ಆ ಕಾಳಗದಲ್ಲಿ ಮಾರಸಿಂಹನ ಸೈನ್ಯವು ಪಸರಿಸಿ ಹಬ್ಬಿಗೊಂದಳಿಸಿ ಬಂದು ತೈಲಪನ ಕಲಿಸಮೂಹವನ್ನು ಮುತ್ತಿತು ಈ ಬಗೆಯಾಗಿ ಉರಿದು ಎದುರಾಗಿ ಬರುವ ದುರ್ಧರ ವಿರೋಧಿಬಲವನ್ನು ತೈಲಪನು ತುಂಡುತುಂಡಾಗಿ ತುಂಡರಿಸಿ ಚಲ್ಲಿದನು ಆಗ ಸಮರದಲ್ಲಿ ಎಂದೆಂದೂ ಬೆಂಗೊಡದ ಮಾರಸಿಂಹನ ವೀರರು ಬೆನ್ನು ತೋರಿಸಿ ದಿಕ್ಕಾಪಾಲಾಗಿ ಓಡಿಹೋದರು ಮಾರಸಿಂಹನೂ ಕೂಡ, ಕಾಲಿಗೆ ಬುದ್ಧಿ ಹೇಳಿದನು ಆತನು ನೆಟ್ಟಗೆ ಬಂಕಾಪುರದವರೆಗೆ ಓಡಿಬಂದು ಅಲ್ಲಿದ್ದ ತನ್ನ ಗುರುಗಳಾದ ಅಜಿತಸೇನಾಚಾರ್ಯರ ಬಳಿಯಲ್ಲಿ ನಿಂತು, ವೈರಾಗ್ಯಶೀಲನಾದನು ಮತ್ತು ಮುಂದೆ ತೀವ್ರವೇ ಅಲ್ಲಿಯೇ ಮರಣ ಹೊಂದಿದನು ಇತ್ತ ಇಂದ್ರನು ಕಂಗೆಟ್ಟು ಯಾರ ಆಶ್ರಯವೂ ಇಲ್ಲದ, ಅತ್ತಿತ್ತ ಅಲೆದಾಡಿ, ಶ್ರವಣಬೆಳಗುಳಕ್ಕೆ ಓಡಿಹೋಗಿ, ಅಲ್ಲಿ ಕೆಲವು ದಿವಸ ಇದ್ದು ಕೊನೆಗೆ ಸಲ್ಲೇಖನ ವಿಧಿಯಿಂದ ಎಂದರೆ ಅನಶನವ್ರತದಿಂದ ಪ್ರಾಣಬಿಟ್ಟನು ಈ ತೆರನಾಗಿ ಪ್ರತಾಪನಿಧಿಯಾದ ತೈಲಪನು ರಟ್ಟರ ಕೈಯಲ್ಲಿದ್ದ ಇಳೆಯನ್ನೂ ಪಟ್ಟವನ್ನೂ ಸಳೆದುಕೊಂಡು, ರಟ್ಟರಾಜ್ಯದ ಅರಸುಗಳನ್ನು ಮುಂಬಿಟ್ಟು ತರಿದೊಟ್ಟಿ ರಟ್ಟಘರಟ್ಟನೆನಿಸಿಕೊಂಡನು

ಮಾಳವೆಯರು ಕರ್ನಾಟಕದ ಮೇಲೆ ದಾಳಿಯಿಟ್ಟು ಬಂದು, ಮಳಖೇಡವನ್ನು ಸೂರೆಗೊಂಡದ್ದನ್ನು, ಗಂಡರಲ್ಲಿ ಗಂಡನಾದ ತೈಲಪನು ಮರೆತಿರಲಿಲ್ಲ ಮಾಳವೆಯರು ಕರ್ನಾಟಕದ ಚಿರಶತ್ರುಗಳು ಅವರನ್ನು ಮೆಟ್ಟದಿದ್ದರ ಸಾಮ್ರಾಜ್ಯದ ವರ್ಚಸ್ಸವು ಉಳಿಯುತ್ತಿರಲಿಲ್ಲ ಆದಕಾರಣ ನೂರ್ಮಡಿ ತೈಲಪನು ಅವರನ್ನು ಬಗ್ಗು ಬಡಿಯುವುದಕ್ಕೋಸ್ಕರ ಉತ್ತರದ ಕಡೆಗೆ ಯುದ್ಧಯಾತ್ರೆಗೆ ಹೊರಟನು ಮಧ್ಯದಲ್ಲಿ ಸೇವುಣದೇಶದ (ಔರಂಗಾಬಾದ, ನಾಸಿಕ, ಖಾನದೇಶ ಜಿಲ್ಲೆಗಳು) ಅರಸನಾದ ಭಿಲ್ಲಮನೊಡನೆ ಸ್ನೇಹ ಬೆಳೆಸಿ, ಆತನೊಂದಿಗೆ ಮಾಳವೆಯ ಕಡೆಗೆ ಸಾಗಿದನು.

ಮಾಳವೆಯ ಅರಸನಾದ ಪರಮಾರ ಮುಂಜನು ತೈಲಪನನ್ನು ಮಾರ್ಕೊಂಡು ಬಂದನು  ಪೈಠಣದ ಹತ್ತಿರ ಗೋದಾವರೀ ತೀರದಲ್ಲಿ ಉಭಯದಳಗಳು ತಾಗಿದವು  ಅತ್ಯಂತ ಭಯಂಕರವಾದ ಕಾಳಗವೆಸಗಿತು  ಬಾಣಗಳ ಸುರಿಮಳೆಯಾಯಿತು , ಸುರಿಗೆಗಳ ಕಾದಾಟವಾಯಿತು  ಆ ಸುರಿಗೆ ಕಾಳಗದಲ್ಲಿ ಭುಜಪ್ರತಾಪ ವಿಭವನಾದ ತೈಲಪನು ಮಾರಾಂತಹಿತರ ತಲೆಗಳನ್ನು ಚೆಂಡು ಹೊಯ್ದಂತೆ ಹಾರಿಸಿ, ಮುಂಡಗಳನ್ನು ಜೊಂಡು ಮುಂದಾಗಿ ಉರುಳಿಸಿದನು  ಆ ರಣಕ್ಷೋಣಿಯಲ್ಲಿ ಆಗ ಭೂತವೇತಾಳಗಳ ಹಬ್ಬವಿದೆಯೆಂದು ಜನರು ಅಚ್ಚರಿಗೊಂಡರು  ಹೀಗೆ ತೈಲಪನು ಸುರಟು ಇದಿರಾಂತರನ್ನು ಕೊಲ್ಲುವ ಅತ್ಯದ್ಭುತವಾದ ವೀರಾಡಂಬರವನ್ನು ಪ್ರಕಟಿಸಿದನು  ತೈಲಪನ ದಳವಾಯಿಯೊಬ್ಬನು ಶತ್ರುವಳವನ್ನು ಹೊಕ್ಕು ಆನೆಗಾಳಗದಲ್ಲಿ ಪರಮಾರ ಮುಂಜನ ಆನೆಯನ್ನು ಕೊಂದು ಮಾವುತನನ್ನು ಮೆಟ್ಟಿ, ರೋಷಾವೇಶದಿಂದ ಮುಂಜನನ್ನು ಸರೆಹಿಡಿದುಕೊಂಡು ಬಂದನು  ಆಗ ತೈಲಪನ ಕಣ್ಣುಗಳಿಂದ ಆನಂದಬಾಷ್ಪಗಳುಸುರಿದವು!  ಆತನು ಮುಂಜನನ್ನು ಬಂಧಿಸಿ, ಬಿಗಿಯಾದ ಸೆರೆಮನೆಯಲ್ಲಿಟ್ಟನು  ಮುಂಜನು ಬಂಧನವನ್ನು ತಪ್ಪಿಸಿಕೊಳ್ಳಲಿಕ್ಕೆ ಪ್ರಯತ್ನಿಸಿದನು  ಆಗ ತೈಲಪನು ಆತನನ್ನು ಕೊಲ್ಲಿಸಿಬಿಟ್ಟನು  ಇದರಿಂದ, ತೈಲಪನ ರಿಪುಗಳ ಹೃದಯದಲ್ಲಿ ಬೆದರಿಕೆಯು ಬಿತ್ತಲ್ಪಟ್ಟುದರಿಂದ ಅವರು ತಣ್ಣಗಾದರು  ತೈಲಪನು ಮುಂದೆ ಉತ್ತರಕ್ಕೆ ಸಾಗಿಹೋಗಿ, ತನ್ನ ತಾಯಿಯತವರೂರೂ ಚೇದಿರಾಜ್ಯದ ರಾಜಧಾನಿಯೂ ಆದ ತ್ರಿಪುರ (ತೇವೂರ) ದಲ್ಲಿ ಕೆಲಕಾಲ ನಿಂತುಕೊಂಡು, ಉತ್ಕಲ ಅಥವಾ ಒಡಿಸಾ ದೇಶದ ಮೇಲೆ ದಂಡೆತ್ತಿ ಹೋದನು  ಆ ದೇಶದ ಅರಸನೊಡನೆ ಒಪ್ಪಂದ ಮಾಡಿಕೊಂಡು ತನ್ನ ಉತ್ತರದ ವಿಜಯಯಾತ್ರೆಯನ್ನು ಮುಗಿಸಿಕೊಂಡು ಮರಳಿ ಮಳಖೇಡಕ್ಕೆ ಬಂದನು

ಅಷ್ಟರಲ್ಲಿ ಹುಬ್ಬಳ್ಳಿ ತಾಲ್ಲೂಕು ವಟ್ಟಿ ಮತ್ತು ಅದರ ಸುತ್ತಲಿನ ಪ್ರದೇಶವನ್ನಾಳುತ್ತಿದ್ದ ಪಾಂಚಾಲದೇವನೆಂಬೊಬ್ಬ ಮಾಂಡಲಿಕನು ತೈಲಪನ ವಿರುದ್ಧವಾಗಿ ನಿಂತನು  ಆಹವಧೀರನಾದ ತೈಲಪನು ಆತ

ನೊಡನೆ ಯುದ್ಧಮಾಡಿ ಆತನನ್ನು ಸೆರೆಹಿಡಿದು ಆತನ ಶಿರಚ್ಛೇದವನ್ನು ಮಾಡಿದನು ಆಗ ತೈಲಪನಿಗೆ ಶತ್ರುಗಳಾರೂ ಉಳಿಯಲಿಲ್ಲ ಈ ರೀತಿಯಾಗಿ ಭೂಚಕ್ರವರ್ತಿಯಾದ ತೈಲಪನು ಮೊದಲು ರಟ್ಟರನ್ನು ಕಿತ್ತು ಇಕ್ಕಿ, ಅದಟನಾದ ಮುಂಜನನ್ನು ಕನಿಕರವಿಲ್ಲದ ಕೊಂದು, ದೊರ್ಗರ್ವದಗುರ್ವಿನಿಂದ ಯುದ್ಧದಲ್ಲಿ ಪಾಂಚಾಲನ ತಲೆಯನ್ನು ಕೊಂಡು, ಮೀರುವ ಸಾಮಂತರ ಮದುಳುಗಳನ್ನು ನೂಕಿ ಚಾಳುಕ್ಯರಾಜ್ಯ ಸಂಪದವನ್ನು ಕೈಕೊಂಡು ಪೃಥ್ವಿಯನ್ನು ನಿಷ್ಕಂಟಕವನ್ನಾಗಿ ಮಾಡಿ, ಜಗದೇಕ ವೀರನಾಗಿ ಇಪ್ಪತ್ತುನಾಲ್ಕು ವರುಷ ರಾಜ್ಯವಾಳಿ, ನೂರ್ಮಡಿ ಭೀಮನೆಂದೂ ಆರಿರಾಯತಲಕರವತ್ತನೆಂದೂ ಹೆಸರುವಾಸಿಯಾದನು

ರಾಷ್ಟ್ರಕೂಟರ ಸಾಮಂತರೆಲ್ಲರೂ ತೈಲಪನಿಗೆ ಮಾಂಡಲಿಕರಾಗಿದ್ದರು ಸವದತ್ತಿಯ ರಟ್ಟಮನೆತನದ ಕಾರ್ತವೀರ್ಯನೂ ಬನವಾಸಿಯ ಭೀಮರಸನೂ ಕೊಂಕಣದ ಅಪರಾಜಿತನೂ ಸೇವುಣದ ಭಿಲ್ಲಮನೂ ಇವನಿಗೆ ಮುಖ್ಯಮಾಂಡಲಿಕರಾಗಿದ್ದರು ಬನವಾಸಿಯ ಭೀಮರಸನು ತೈಲಪನ ಅಂಕಕಾರ (ಬಲಗೈ) ನಾಗಿದ್ದನು ರಾಷ್ಟ್ರಕೂಟರಿಂದ ಅಪಹೃತವಾದ ವಿಶ್ವಧರಣೀತಳವನ್ನು ಈಳ್ದುಕೊಂಡು, ತನ್ನ ಬಾಹುವೀರ್ಯದಿಂದ ಚಾಳುಕ್ಯರಾಜ್ಯಸಂವರ್ಧನವನ್ನು ಮಾಡಿ ತೈಲಪನು ಪ್ರತಾಪತೈಲನಾಗಿ ಮೆರೆದನು ಆತನು ತನ್ನ ಭುಜಗರ್ವದಿಂದ ಆರ್ಜಿಸಿದ ಉರ್ವಿಗೆ ಮುನ್ನೀರೆ ಮೇರೆಯಾಗಿತ್ತು ಆತನ ಕಾಲದಲ್ಲಿ ಶೌರ್ಯವೂ ಸಾರಸ್ವತವೂ ಒಂದೆಡೆಯಲ್ಲಿ ಮಿಳಿತವಾಗಿದ್ದವು ರನ್ನ, ಚಾವುಂಡರಾಯರಂತಹ ದಂಡನಾಯಕರು ವೀರಾಗ್ರಗಣ್ಯರಾಗಿದ್ದರಲ್ಲದ ವಿದ್ಯಾಗ್ರಗಣ್ಯರೂ ಆಗಿದ್ದರು ಮಹಾಕವಿಯಾದ ರನ್ನನು ತನ್ನ ಗದಾಯುದ್ಧವನ್ನು ಬರೆದುದು ಈ ನೂರ್ಮಡಿ ತೈಲಪನ ಆಶ್ರಯದಲ್ಲಿಯೆ ಆತನು ತೈಲಪನನ್ನು ಈ ರೀತಿಯಾಗಿ ಬಣ್ಣಿಸಿರುತ್ತಾನೆ—"ಸಮಸ್ತ ಭುವನಾಶ್ರಯಂ, ಶ್ರೀಪೃಥ್ವೀವಲ್ಲಭಂ, ಮಹಾರಾಜಾಧಿರಾಜಂ, ರಾಜಪರಮೇಶ್ವರಂ, ಪರಮಭಟ್ಟಾರಕಂ, ಕರಹಟಭಯಂಕರಂ, ಚಾದಿಳಾಂಧ್ರಕುಲೀನ ಭುವನಸದ್ಗುಣಮಣಿವಿಭೂಷಣಂ, ಸಿಂಧುರಕಂಧರಾಧಿರೂಢಪಲ್ಲಿ ಕೋ

ಟ್ಟೋಲ್ಲಂಘನಂ, ಭದ್ರತಪದ್ರಾವಣಂ, ಕೊಂಕಣ ಭಯಂಕರಂ, ಉಭಯಬಲದಲ್ಲಣಂ, ಮಾರ್ಮಲೆವರಿಗಜಕೇಸರಿ, ಕರೀಂದ್ರಕಂಠೀರವ ಮಲ್ಲಂ, ವೈರಿ ಫಣೀಂದ್ರಸೌಪರ್ಣಂ, ತ್ರಾತಲಿಕರಾಜಗಜಕೇಸರಿ, ರಣ ಕುಂಭಿಕುಂಬಕಂಠೀರವಂ, ಯಾದವಕುಲಾಂಬರದ್ಯುಮಣಿ, ರಣರಂಗ ಭೀಷಣಂ, ರಿಪುಬಲಪುಂಜಗಜಘಟಾಭಂಜನನುಂ, ಸಾಮಂತ ಮೃಗ ಶಾರ್ದೂಲರಣರಂಗರಾಕ್ಷಸಂ, ಅಕಲಂಕರಾಮ ತನ್ವರ್ಗತಳಪ್ರಹಾರಂ, ಅರಿಷ್ಟ ಘರಟ್ಟ ರಾಷ್ಟ್ರಕೂಟ ಕಾಳಕೂಟಂ, ನಿಜಭುಜಚಕ್ರವರ್ತಿ, ಪಾಂ ಚಾಲ ಮದೇಭ ಪಂಚಾನನಂ, ಸಂಹಾರಸಿಂಹಿತ್ವ ಪೂರ್ಜರವಜ್ರದಾ ಥಾಘೂರ್ಜರಭಯಜ್ವರ ಸಮಸ್ತಮಾಳವ ನಪ್ರಾರ್ತಿಶತ್ರುಗ್ರಹೋಚ್ಚಾ ಟನುಂ, ಮತ್ತಮನೇಕದೇಶಾಧೀಶ್ವರಂ, ಪರನೃಪಮದಗಜಘಟಾಭಂಜ ನನುಂ ಉತ್ಪಕ್ಯಮಲ್ಲಂ



### ಶೂರಸಾಹಸಿಯಾದ

# ಹೊಯ್ಸಳ

---

## (೧೦೦೬)

ಶೂರರಲ್ಲಿ ಕ್ಷಾತ್ರತೇಜವು ಅವ್ಯಾಹತವಾಗಿ ಒಳಗೆ ಪ್ರಜ್ವಲಿಸುತ್ತಿದ್ದರೂ ಯಾವಾಗಲೂ ಬಹಿರಂಗವಾಗಿ ಮಿಂಚುತ್ತಿರುವುದಿಲ್ಲ. ಆದಕಾರಣ ಅನೇಕ ಕ್ಷಾತ್ರಶಿಖಾಮಣಿಗಳು ತಮ್ಮ ರಕ್ತದಲ್ಲಿ ಶೌರ್ಯಬಿಂದುಗಳು ಓತಪ್ರೋತವಾಗಿ ತುಂಬಿದ್ದರೂ ಅವನ್ನು ಮುಚ್ಚಿಕೊಂಡು ಅನೇಕ ಕಾಲದವರೆಗೆ ಅನ್ಯ ವ್ಯವಸಾಯದಲ್ಲಿ ತೊಡಗಿರುತ್ತಾರೆ. ಅವರಲ್ಲಿ ಅಡಗಿಕೊಂಡಿದ್ದ ತೇಜಸ್ಸು ಯಾವುದೊಂದು ಪ್ರಸಂಗದಲ್ಲಿ ಥಳಕ್ಕನೆ ಹೊರಹೊಮ್ಮಿತೆಂದರೆ, ಕೆಲವು ಗುರುಗಳು ಅವರ ರಾಜತ್ವಯೋಗ್ಯತೆಯನ್ನು ಕಂಡು ಒಡಿದು ಪ್ರೋತ್ಸಾಹಿಸಿ ಅವರಿಂದ ಹೊಸ ರಾಜ್ಯವನ್ನು ಕಟ್ಟಿಸುತ್ತಾರೆ. ಸಳನೆಂಬೊಬ್ಬ ಸಾಮಾನ್ಯ ವೀರನು ಒಂದು ಸಮಯದಲ್ಲಿ ಹೀಗೆ ಪ್ರಕಾಶಮಾನನಾಗಿ ಜಿನಮುನಿಯ ಉಪದೇಶದಿಂದ ಹೊಯ್ಸಳ ಕುಲಸ್ಥಾಪಕನಾದನು.

ಮೈಸೂರ ದೇಶದ ಕಡೂರ ಜಿಲ್ಲೆಯಲ್ಲಿ ಅಂಗಡಿಯೆಂಬುದೊಂದು ಚಿಕ್ಕಊರು. ಸುಮಾರು ಸಾವಿರ ವರುಷಗಳ ಪೂರ್ವದಲ್ಲಿ ಶಶಕಪುರವೆಂದು ಅದಕ್ಕೆ ಹೆಸರು. ಅದರ ನೆರೆಯಲ್ಲಿ ವಾಸಂತಿಕಾ ಅಥವಾ ವಸಂತಮ್ಮನ ಗುಡಿಯುಂಟು. ಅಲ್ಲಿ ಸುದತ್ತನೆಂಬ ಜೈನಯತಿ ವಾಸಿಸುತ್ತಿದ್ದನು. ಅವನ ಹೃದಯದಲ್ಲಿ ಪ್ರದೀಪ್ತವಾಗಿದ್ದ ಜ್ಞಾನವು ಗಂಭೀರವಾದ ಮುಖದಲ್ಲಿ ಕಾಂತಿರೂಪವಾಗಿ ಒಡಮೂಡಿತ್ತು. ಆಧ್ಯಾತ್ಮದಲ್ಲಿ



“ ಹೊಯ್, ಸಳ ”

(ಪುಟ ೪೮—೫೧ ನೋಡಿರಿ)

ಅಭಿರುಚಿಯುಳ್ಳ ಸಳನು ಆ ಸುದತ್ತಯತಿಯ ಶಿಷ್ಯನಾಗಿದ್ದನು ಆತನು ಜ್ಞಾನಸಂಪಾದನೆಗಾಗಿ ಪ್ರತಿನಿತ್ಯವೂ ಸ್ವಾಮಿಯ ಸನ್ನಿಧಾನಕ್ಕೆ ಆತನಿಂದ ಪಾಠಹೇಳಿಸಿಕೊಳ್ಳುವುದಕ್ಕೆ ಬರುತ್ತಿದ್ದನು

ಸಳನು ಸೋಮವಂಶಕ್ಕೆ ಸೇರಿದ ಯದುಕುಲದವನು. ಕ್ಷಾತ್ರ ಸ್ವಭಾವಕ್ಕೆ ತಕ್ಕಂತೆ ಮೃಗಯಾವಿನೋದ ಮೊದಲಾದ ವೀರೋಚಿತ ಕಾರ್ಯಗಳು ಆತನಿಗೆ ತೀರ ಪ್ರಿಯವಾಗಿದ್ದುವು ಆತನು ಬೇಟೆಯಲ್ಲಿ ಒಳ್ಳೆಯ ಚಪಲನೂ ಧೀರನೂ ವೀರನೂ ಆಗಿದ್ದನು ಒಂದು ದಿನ, ಕಾನನದಲ್ಲಿ ಸಳನು ಸಿಡಿಲಂತೆ ಗರ್ಜಿಸಿ ಎರಗುವ ಸಿಂಹಸಮೂಹವನ್ನು ತುಡುಕಿರಿದು, ಅತಿರಭಸದಿಂದ ಭರ್‍ರನೆ ಬಂದು ಹಾಯುವ ಸೂಕರಾನೀಕವನ್ನು ತಡೆದೊತ್ತಿ, ತೊತ್ತಳದುಳಿಯುತ್ತ ಬರುವ ಮತ್ತದಂತಿಸಂತತಿಯನ್ನು ಹೊಡೆದೆಳೆದು ಭೀಕರವಾದ ಮೃಗಯಾವಿಹಾರದಿಂದಿರಲು ಚಿರ್ಚುಗಳು ಬದರಿದುವು; ತೋಳಗಳು ಕದಲಿದುವು, ಕರಡಿಗಳು ಹುದುಗಿದುವು, ಕಾಡು ಕೋಣಗಳು ಚದುರಿದವು, ಎರಳೆಗಳ ಎದೆಯೊಡೆಯಿತು, ಹಕ್ಕಿಗಳು ಹೌಹಾರಿದವು ಆ ಕೋಲಾಹಲದಿಂದ ಸಹ್ಯಾದ್ರಿಯ ಉತ್ತುಂಗಸಾನುಶ್ರೇಣಿಗಳು ಕಂಬಿರಿದುವು ಹೀಗೆ ಅನೇಕ ಕ್ರೂರ ಪಶುಗಳ ತೊವಲನ್ನು ಬಿಚ್ಚಿ, ಎಲುವನ್ನು ಕೊಚ್ಚಿ, ಮೃಗಯಾವಿಲಾಸವನ್ನು ತೀರಿಸಿಕೊಂಡು, ಸಳನು ಗುರುಗಳ ಬಳಿ ಸಾರಿದನು ದಣುವಾರಿಸಿಕೊಂಡು ಧರ್ಮಶ್ರವಣ ಮಾಡುತ್ತ ಕುಳಿತನು ಆಗಲ್ಲಿದ್ದವರು ಇಬ್ಬರೇ ಅಷ್ಟರಲ್ಲಿ ಒಂದು ಹೆಬ್ಬುಲಿಯು ಗುಡುಗುತ್ತ ಜಿಗಿಯುತ್ತ ಅಡವಿಯೊಳಗಿಂದ ವಸಂತಮ್ಮನ ಗುಡಿಗೆ ಬಂದಿತು. ದೃಢಚಿತ್ತನಾದ ಸನ್ಯಾಸಿ ಬೆಚ್ಚಲಿಲ್ಲ; ಧೈರ್ಯೋದ್ದಾಮನಾದ ಸಳನೂ ಅಳುಕಲಿಲ್ಲ ಇಬ್ಬರೂ ಸ್ಥಿರಾಸೀನರಾಗಿದ್ದರು ಮೈ ಮರೆದು ಕುಳಿತ ಅವರ ಗಂಟಲಿಗೆ ಆ ಹೆಬ್ಬುಲಿಯು ತನ್ನ ಹದನಾದ ಪಂಜರವನ್ನು ಎತ್ತಿತು ಇನ್ನೊಂದು ಕ್ಷಣದಲ್ಲಿ ಇವರ ಗಂಟಲುಗಳನ್ನು ಸೀಳಿ ಅಸುವನ್ನು ಹೀರುವುದಿತ್ತು ಆಗ ಸುದತ್ತಮುನಿಯು 'ಹೊಯ್-ಸಳ' ಎಂದು ತನ್ನ ಕೈಯಲ್ಲಿದ್ದ ಸೆಳೆ (ಬೆತ್ತ) ಯನ್ನು

ನೀಡಿದನು. ಸಳನು ಅದನ್ನು ತೆಗೆದುಕೊಂಡು ಆರ್ಭಟಿಸಿ ಬರುತ್ತಿದುವ ಆ ಹೆಬ್ಬುಲಿಯ ಬಾಯಲ್ಲಿ ಅದನ್ನು ತಿವಿದು ತುಂಡರಿಸಿದನು. ಗುರುವಾದ ಸುದತ್ತನು ಇದಕ್ಕೆ ಮೆಚ್ಚಿದನು. ಆತ್ಮಾನಾತ್ಮವಿವೇಚನೆಯಲ್ಲಿ ಕಾಲ ಕಳೆವುದಕ್ಕಿಂತ ಈ ಕ್ಷತ್ರಿಯ ರತ್ನವು ಶೌರ್ಯಸಾಹಸಗಳಿಂದ ನಿರ್ಮಿತವಾದ ರಾಜಸಿಂಹಾಸನದಲ್ಲಿಯೇ ಶೋಭಿಸುವುದು ಯೋಗ್ಯವೆಂದು ಸುದತ್ತನಿಗೆ ಎನಿಸಿತು ಆತನು ಸಳನಿಗೆ ಧೈರ್ಯಶೌರ್ಯಗಳು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುವಂತೆಯೂ ಸ್ಫೂರ್ತಿಯುಂಟಾಗುವಂತೆಯೂ ಅಭಿಮಾನವು ಬಳಗುವಂತೆಯೂ ಉಪದೇಶವನ್ನಿತ್ತನು

ಜೈನಧರ್ಮಕ್ಕೆ ಆಧಾರಸ್ಥಂಭದಂತಿದ್ದ ಗಂಗವಂಶವೂ ರಾಷ್ಟ್ರವಂಶವೂ ಊರ್ಜಿತಾವಸ್ಥೆಯಲ್ಲಿದ್ದಾಗ ಆ ರಾಜರು ಚೋಳರ ಆವೇಗವನ್ನು ತಡೆದು ನಿಲ್ಲಿಸಿದ್ದರು. ಆ ಎರಡು ವಂಶಗಳ ಶೌರ್ಯದ ಗಟ್ಟಿ ಕರಗಿದ ಬಳಿಕ ಆ ವಂಶಗಳನ್ನು ಹತ್ತಿಕ್ಕಿ ಚೋಳರು ಗಂಗರಾಜ್ಯದಲ್ಲಿ ತಮ್ಮ ಅರಸೊತ್ತಿಗೆಯನ್ನು ಪಸರಿಸಿದ್ದರು. ರಾಷ್ಟ್ರಕೂಟ ರಾಜ್ಯವನ್ನು ಪಶ್ಚಿಮಚಾಳುಕ್ಯರು ತಮ್ಮ ಛತ್ರದ ನೆಳಲಿನಲ್ಲಿ ಸೇರಿಸಿಕೊಂಡಿದ್ದರು. ಅಂತು, ಈಗ ಸಳನ ತಾಯ್ನಾಡು ಚೋಳಾಧೀನವಾಗಿತ್ತು ಅದರ ಸಂಕೋಲೆಯನ್ನು ಕಿತ್ತೊಗೆದು ಸ್ವರಾಜ್ಯವನ್ನು ಸ್ಥಾಪಿಸುವುದೇ ಅವನ ಮೊದಲನೆಯ ಕರ್ತವ್ಯವಾಯಿತು ಚೋಳರ ಧ್ವಜವನ್ನು ಕೀಳುವುದು ಸಾಮಾನ್ಯಕಾರ್ಯವಲ್ಲ ಸಳನು ಚೋಳರಿಗೂ ಚಾಳುಕ್ಯರಿಗೂ ಇದ್ದ ಹಗೆತನದ ಲಾಭವನ್ನು ಪಡೆಯ ಬಯಸಿದನು ಚೋಳರ ಮೂಲೋತ್ಪಾಟನ ಮಾಡಬೇಕೆಂದೇ ಚಾಳುಕ್ಯರ ಉದ್ದೇಶವಿದ್ದುದರಿಂದ ಅವರು ಸಹಜವಾಗಿಯೇ ಸಳನ ಹೆಗಲ ಮೇಲೆ ಕೈಹಾಕಿದರು ಆಮೇಲೆ ಸಳನು ಚೋಳರೊಡನೆ ಜಗಳ ಹೂಡಿದನು. ಇವನ ಸಮ್ಮುಖದಲ್ಲಿ ಚೋಳರಾಜನ ಸುಭಟರು ಇಟ್ಟಣಿಸಿದರು. ಹುಯ್ಲಿಗೆ ಆರಂಭವಾಯಿತು ಮೃಗಯಾವಿನೋದಿಯಾದ ಸಳನು ಪರಸೈನ್ಯದಲ್ಲಿ ಮನುಷ್ಯರ ಬೇಟೆಯಾಡಿದನು. ಚೋಳ ಅರಸನು ಮುನಿಮುನಿದು ಕಾದಿದನು, ಸಳನೂ ಹುರಿಗೊಂಡು ಕೋಪಾಟೋಪದಿಂದ ಆತನಿಗೆ ಇದಿರಾದನು ಚೋಳನು ಕಂಗೆಟ್ಟು ಮುಂಗಾಣದೆ ತನ್ನ ರಾಜ್ಯ

ವನ್ನು ಸೇರಬೇಕಾಯಿತು. ಸಳನ ನಾಡಿನ ಬೇಡಿಗಳು ಕತ್ತರಿಸಿದುವು, ಆತನು ಹೊಸ ರಾಜ್ಯಸ್ಥಾಪಕನೆಂದು ಹೊಗಳಿಸಿಕೊಂಡನು ತನ್ನ ಸ್ವರಾಜ್ಯಸ್ಥಾಪನೆಗೆ ಬೀಜವಾಕ್ಯದಂತಿರುವ "ಹೊಯ್-ಸಳ" ಎಂಬ ಜಿನಮುನಿವರನ ಉದ್ಗಾರವೇ ಆತನ ಉಪನಾಮವಾಯಿತು. ತನ್ನ ಶೌರ್ಯವನ್ನು ಪ್ರಕಟಗೊಳಿಸಿ ಸ್ವಾತಂತ್ರ್ಯ ಯುದ್ಧದ ಹಾದಿಗೆ ಹಚ್ಚಿದ ಆ ಹುಲಿಯೂ ಸುದತ್ತಗುರುವಿನ ಸೆಳೆಯೂ ಧ್ವಜಚಿಹ್ನಗಳಾದುವು. ಹೀಗೆ, ಸಳನ ಹೆಸರು ಆತನ ಇತಿಹಾಸದ ಸ್ಮಾರಕವಾಯಿತು, ಪತಾಕೆಯು ಆತನ ಪ್ರತಾಪದ್ಯೋತಕವಾದ ಕುರುಹಾಯಿತು

ಮುಂದೆ, ಈ ಹೊಯ್ಸಳ ವಂಶವು, ಚಾಳುಕ್ಯರು ಸೊರಗಿದ ಹೊತ್ತು ಸಾಧಿಸಿ ಅವರನ್ನು ಮುರಿದಿಕ್ಕಿ ಸಾರ್ವಭೌಮತ್ವವನ್ನು ಪಡೆದು, ಜಯಶ್ರೀಯ ವಿಲಸಿತಾವಾಸವಾಗಿಯೂ ಯಶೋವನಿತೆಯ ವಿರಾಮಸ್ಥಾನವಾಗಿಯೂ ಉದ್ಯದ್ಗುಣ ಮೌಕ್ತಿಗಳ ಆಕರವಾಗಿಯೂ ಶರಣಾಗತಧರಣೀಶ್ವರರ ಆಶ್ರಯದುರ್ಗವಾಗಿಯೂ ಕಲಾನಿಧಿಯಾಗಿಯೂ ಎರಡು ಮೂರು ನೂರು ವರುಷಗಳವರೆಗೆ ಘನತೆಯಿಂದ ರಾಜ್ಯವನ್ನಾಳಿತು.



## ರಣಭೈರವಿಯಾದ

# ಅಕ್ಕಾದೇವಿ

---

## (೧೦೨೧-೧೦೫೫)

ದೇಶದ ಪರಿಸ್ಥಿತಿಯೇ ಶೌರ್ಯಕ್ಕೆ ಪೋಷಕವಾದುದು. ಎಲ್ಲ ಕಡೆಯಿಂದಲೂ ವೀರಗರ್ಜನೆಯೂ ಕೈದುಗಳ ಖಣಖಣಾಟವೂ ಜಯನಿನಾದವೂ ಒಟ್ಟಾಗಿ ಸೇರಿ ವಾತಾವರಣದಲ್ಲಿ ಅತ್ಯದ್ಭುತವಾದ ತರಂಗಗಳೆದ್ದವೆಂದರೆ ಜನಜೀವನದಲ್ಲಿ ಶೌರ್ಯದ ಸಂಚಾರವಾಗುತ್ತದೆ. ಹೆಂಗಸರು ಕೂಡ ಗಂಡಸರಿಗೆ ಸರಿಮಿಗಿಲಾದ ಕಡುಗಲಿಗಳಾಗುತ್ತಾರೆ; ಆಗ ಹುಟ್ಟುವ ಸಂತತಿಯೆಲ್ಲವೂ ಪರಾಕ್ರಮ ಸಂಪನ್ನವಾಗುತ್ತದೆ. ಇದಕ್ಕನುಗುಣವಾಗಿ ಕರ್ನಾಟಕದಲ್ಲಿ ಅನೇಕ ವೀರಸ್ತ್ರೀಯರು ತೋಳ್ಬಲದ ದುಂದುಭಿಯನ್ನು ಮೊಳಗಿಸಿದರು. ಘನಶೌರ್ಯದ ಮಹಾಪ್ರವಾಹದಂತಿರುವ ಚಾಳುಕ್ಯ ವಂಶದಲ್ಲಿ ಮೈಲಾಳದೇವಿ, ಕೇತಳದೇವಿ ಮೊದಲಾದವರು ರಾಜ್ಯಭಾರಗಳನ್ನು ವಹಿಸಿದ್ದರು. ಈ ಅಕ್ಕಾದೇವಿಯು ಚಾಳುಕ್ಯವಂಶದಲ್ಲಿ ಹುಟ್ಟಿದ ವೀರಸ್ತ್ರೀಯು. ಅವಳು ಕದನದಲ್ಲಿ ತೋರಿಸಿದ ಅಧಟೂ ಕಿಸುಕಾಡು (ವಿಜಾಪುರಜಿಲ್ಲೆ) ನಾಡಿನಲ್ಲಿ ಅರಸುಗೈದ ಚಾಣಾಕ್ಷತೆಯೂ ವರ್ಣನಾತೀತವಾಗಿವೆ. ಇಂತಹ ಸ್ತ್ರೀರತ್ನಗಳಿಂದಲೂ ಅವರ ಹೊಟ್ಟೆಯಿಂದ ಹುಟ್ಟಿದ ಪುರುಷಸಿಂಹರಿಂದಲೂ ಕರ್ನಾಟಕವು ಅಷ್ಟೈಶ್ವರ್ಯದ ಅಟ್ಟಹಾಸದಿಂದ ಮೆರೆದುದೇನಾಶ್ಚರ್ಯ?

ಈ ಅಕ್ಕಾದೇವಿ, ಕೀರ್ತಿದೇವತೆಯ ಆವಾಸಸ್ಥಾನದಂತಿದ್ದ ಚಾಳುಕ್ಯಾನ್ವಯದ ಜೀರ್ಣೋದ್ಧಾರಕನಾದ ತೈಲಪನ ಮೊಮ್ಮಗಳು; ಆತನ

ಕಿರಿಮಗನಾದ ಯಶೋವರ್ಮನ ಮಗಳು; ಚಾಳುಕ್ಯಚಕ್ರವರ್ತಿಗಳಲ್ಲಿ ಪ್ರಸಿದ್ಧನಾದ ಜಯಸಿಂಹನ ಅಕ್ಕ  ಕಿಸುಕಾಡು ಎಪ್ಪತ್ತೂ ತೊರಗರೆ ಆರೂ ಮಾಸವಾಡಿ ನೂರಾನಾಲ್ವತ್ತೂ ಈಕೆಯ ಪ್ರಭುತ್ವಕ್ಕೆ ಸೇರಿದ್ದವು. ಅವಳು ಆ ಪ್ರದೇಶವನ್ನು ೧೦೨೧ರಿಂದ ೧೦೫೫ರವರೆಗೆ ಆಳಿದಳು ಈಕೆಯ ತಮ್ಮನಾದ ಜಯಸಿಂಹನೂ ಆತನ ಮಗನಾದ ಆಹವಮಲ್ಲ ಸೋಮೇಶ್ವರನೂ ಈ ಅವಧಿಯಲ್ಲಿ ಚಾಳುಕ್ಯ ಸಾರ್ವಭೌಮರಾಗಿದ್ದರು  ಈಕೆ ನಡೆನುಡಿಗಳಿಂದ ಜನಕ್ಕೆ ಬೇಕಾದವಳು, ಗುಣದ ಬೆಡಂಗಿಯೆಂದು ಹೊಗಳಿಸಿಕೊಂಡಳು  ಈಕೆಯ ಹಲವು ಕಾಳೆಗಗಳಲ್ಲಿ ಗೋಕಾವಿಯದು ಮುಖ್ಯವಾದುದು  ವಿಜಾಪುರ ಜಿಲ್ಲೆಯ ಹುನಗುಂದ ತಾಲೂಕಿನಲ್ಲಿ ಈಗ ಹಾಳಾಗಿ ಮುಳ್ಳುಗಳ್ಳಿ ಬಳೆದ ವಿಕ್ರಮಪುರ ಅಥವಾ ಅರಸಿಬೀದಿಯೇ ಈಕೆಯ ರಾಜಧಾನಿ

ಕೋಕಾಗೆ (ಗೋಕಾವಿ) ಯ ಕೊತವಾಲನು ಕೊಬ್ಬಿ ಚಾಳುಕ್ಯರ ಪ್ರತಿಯಾಗಿ ಬಂಡನ್ನೆಬ್ಬಿಸಿದನು  ಆಗ ಸೋಮೇಶ್ವರನು ದೊರೆಯಾಗಿದ್ದನು  ಜರಿಯನ್ನೊರಸುವುದಕ್ಕೆ ತೋರಗದೆಯೇಕೆಂದು ಆ ಚಕ್ರವರ್ತಿಯನ್ನು ನಿಲ್ಲಿಸಿ ಅಕ್ಕಾದೇವಿ ತಾನೇ ಮುಂದಾದಳು  ಕೆಲವು ತುಳಿಲಾಳುಗಳ ದಂಡಿನ ಕೂಡ ಆ ಪುಂಡನನ್ನು ಹಣಿಯಲು ಹೊರಟಳು  ಗೋಕಾವಿಗೆ ಮುತ್ತಿಗೆಯಿಟ್ಟಳು  ತ್ರೈಲೋಕ್ಯಮಲ್ಲನಾದ ಸೋಮೇಶ್ವರನು ಬರದೆ ಅಕ್ಕಾದೇವಿ ಬಂದುದರಿಂದ ಕೊತವಾಲನು ಹಿಗ್ಗಿದನು  ಹೆಂಗಸನ್ನು ಸೋಲಿಸುವುದೇನು ದೊಡ್ಡ ಮಾತೆಂದು ಆತನು ಬಗೆದನು  ಅಕ್ಕಾದೇವಿಯು ಉಚ್ಚಂಡಭೈರವಿಯೆಂಬುದೂ ರಣರಂಗಮಾರಿಯೆಂಬುದೂ ಆ ಕುಮತಿಗೆ ತಿಳಿಯಲಿಲ್ಲ! ಈಕೆಯ ಬಲವನ್ನೆಲ್ಲ ತೆರಗೆಲೆಯಂತೆ ಹಾರಿಸಿಬಿಡುವೆನೆಂದು ಉಬ್ಬಿ ಭರ್ರನೆ ಬಂದು ಕಾದತೊಡಗಿದನು  ಅಬಲೆಯರು ನಾಯಕತಿಯರಾಗಿ ರಣದೇವತೆಯ ಬಲಿಗೆ ತಮ್ಮ ಜೀವಗಳನ್ನೇ ಮುಂದೂಡಿರುವಾಗ ಆ ಸೈನ್ಯದ ಬಲದ ಸಾಮರ್ಥ್ಯವು ಗಂಡಸರ ಸೈನ್ಯದ ಸಾಮರ್ಥ್ಯದ ನೂರ್ಮಡಿಯಾಗುತ್ತದೆ  ಇಷ್ಟಲ್ಲದೆ ಅಕ್ಕಾದೇವಿ **ನೂರ್ಮಡಿ** ತೈಲಪನ ಮೊಮ್ಮಗಳು! ಅವಳು ಕೊತವಾಲನ ಕಾಲಾಳುಗಳ ಕಾಲಾಟ

ವನ್ನಡಗಿಸಿದಳು! ಕುದುರೆಗಳನ್ನು ಸದೆಬಡಿದಳು! ಆನೆಗಳ ಗಂಡಸ್ಥಳಗಳನ್ನೊಡೆದಳು! ಒಟ್ಟೊಟ್ಟಾಗಿ ಬರುವ ಚತುರಂಗ ಸೇನೆಯನ್ನು ತರಿತರಿದಟ್ಟಿದಳು! ಒಂದೆರಡು ನಿಮಿಷಗಳಲ್ಲಿ ಗೋಕಾವಿಯ ದಂಡು ಕಲುಕಾಡಿಹೋಯಿತು. ಅದರಲ್ಲಿ ಹಲವರು ಅಳಿದರು; ಉಳಿದವರು ಕೆಲವರು ಜಾರಿದರು; ಕೆಲವರು ಶರಣೆಂದರು! ಆ ಬಟ್ಟಬಯಲಾದ ಕಣದಲ್ಲಿ ಅಕ್ಕಾದೇವಿ ಕೊತವಾಲನ ಸಮ್ಮುಖವನ್ನೈದಿದಳು. ಕೈಚಳಕದಿಂದ ಚಲಿಸುತ್ತಿರುವ ಅವಳ ಎರಡೇ ಭುಜಗಳು ಆತನಿಗೆ ಅಷ್ಟಾದಶಭುಜಗಳಾಗಿ ತೋರಿದುವು! ಒಂದೊಂದು ಹಸ್ತದಲ್ಲಿಯೂ ಒಂದೊಂದು ಹದನವಾದ ಕೈದುಗಳು ಕಂಡುವು! ಅಕ್ಕಾದೇವಿಯು ಆತನಿಗೆ ಮಹಿಷಾಸುರಮರ್ದಿನಿಯಂತೆ ಕಾಣಿಸಿದಳು! ಆತನು ಕೈಕಾಲುಗೆಟ್ಟು ಕಕ್ಕಾವಿಕ್ಕಿಯಾಗಿ ತಪ್ಪಾಯಿತೆಂದು ಮರೆಹೊಕ್ಕು ಪ್ರಾಣದಾನವನ್ನು ಬೇಡಿಕೊಂಡನು. ಹೀಗೆ ಬಂಡಾಯವು ನಂದಿ ತಣ್ಣಗಾಯಿತು.

ಅಕ್ಕಾದೇವಿಯ ಈ ಪರಾಕ್ರಮವನ್ನು ಸೋಮೇಶ್ವರನು ಅಭಿನಂದಿಸಿ ಆನಂದಭರಿತನಾದನು. ಆಗ ಆಕೆಗೆ ರಣಭೈರವಿಯೆಂಬ ಅನ್ವರ್ಥಕ ನಾಮವು ಉಂಟಾಯಿತು.



## ಆಹವಮಲ್ಲನಾದ

# ಸೋಮೇಶ್ವರ

---

(೧೦೪೨-೧೦೬೮)

ಚಾಳುಕ್ಯಾನ್ವಯಸಮುದ್ಧರಣನಾದ ತೈಲಪನ ತರುವಾಯದಲ್ಲಿ ಪಟ್ಟವೇರಿದ ಅರಸರು ತಮ್ಮ ಶೂರತನದಿಂದಲೂ ಜಾಣತನದಿಂದಲೂ ರಾಜ್ಯವನ್ನು ವಿಸ್ತಾರಗೊಳಿಸಿ, ಕರ್ನಾಟಕದ ಕೀರ್ತಿಯನ್ನು ದಿಗಂತದಲ್ಲಿ ಮೊಳಗಿಸಿದರು ಅಂತಹವರಲ್ಲಿ ಈ ಸೋಮೇಶ್ವರನೂ ಒಬ್ಬ ಆತನು ತೈಲಪನ ಮರಿಮಗ. ಆತನು ಸಿಂಹಾಸನವೇರಿದಾಗ ತೇಜೋಧಾಮನಾದ ತೈಲಪನು ತೀರಿಕೊಂಡು ನಾಲ್ವತ್ತು ನಾಲ್ವತ್ತೈದು ವರ್ಷಗಳಾಗಿದ್ದವು. ಸೋಮೇಶ್ವರನಿಗೆ ಯುದ್ಧವೆಂದರೆ ಬಲು ಹಿಗ್ಗು ಆತನು ಅನೇಕ ದುರ್ಗಾಧೀಶರನ್ನೂ ಸಾಮಂತದ್ರೋಹರನ್ನೂ ಉದ್ಧತರಿಪುಗಳನ್ನೂ, ನಿರ್ಮೂಲಿಸಿ, ವಿಕ್ರಾಂತಾರಾತಿಗಳನ್ನು ಕಳಚಿ, ಧರೆಯನ್ನು ನಿಷ್ಕಂಟಕವಾಗಿ ಮಾಡಿದನು. ಹೀಗೆ ಆತನು ಸಾಮ್ರಾಜ್ಯದೊಳಗಿನ ಅಂತಃಕಂಟಕರನ್ನು ಪಡಲ್ವಡಿಸಿ ಸಾಮ್ರಾಜ್ಯದಲ್ಲಿ ಸಂಪೂರ್ಣವಾದ ಶಾಂತತೆಯನ್ನು ಪ್ರಸ್ಥಾಪಿಸಿದ್ದನು. ಆದರೆ, ಉತ್ತರದಲ್ಲಿ ಮಾಳವರೂ ದಕ್ಷಿಣದಲ್ಲಿ ಚೋಳರೂ ಕರ್ನಾಟಕಸಾಮ್ರಾಜ್ಯದ ಪ್ರಬಲವಿರೋಧಿಗಳಾಗಿದ್ದರು ಅವರು ಸೋಮೇಶ್ವರನಿಗೆ ಶಾಂತದಿಂದಿರಗೊಡಲಿಲ್ಲ ಆದುದರಿಂದ, ಸೋಮೇಶ್ವರನು ತನ್ನ ಆಯುಷ್ಯವನ್ನೆಲ್ಲ ಅವರೊಡನೆ ಕಾದುವುದರಲ್ಲಿ ಕಳೆಯಬೇಕಾಯಿತು

ಸಮರಧೀರನಾದ ತೈಲಪನು ಪರಮಾರ ಮುಂಜ ದೊರೆಯನ್ನು ಹಿಡಿದು ಬಿಗಿದು ತಂದು ಸೆರೆಯಲ್ಲಿಟ್ಟು, ಮುಂದೆ ಆತನನ್ನು ಕೊಲ್ಲಿಸಿದನು.

ಆಗಿನಿಂದ, ಚಾಳುಕ್ಯರಿಗೂ ಮಾಳವರಿಗೂ ಇದ್ದ ವಿದ್ವೇಷವು ದಿನದಿನಕ್ಕೆ ಪ್ರವೃದ್ಧಮಾನವಾಗುತ್ತ ನಡೆಯಿತು ಸೋಮೇಶ್ವರನ ತಂದೆಯ ಕಾಲದಲ್ಲಿ, ಮುಂಜನ ತಮ್ಮನ ಮಗನಾದ ಭೋಜನು ಅಲ್ಲಿಯ ರಾಜನಾಗಿದ್ದನು ಅತ್ಯಂತ ವಿದ್ಯಾಪ್ರೇಮಿಯೆಂದು ಹೆಸರು ಪಡೆದ ಪ್ರಸಿದ್ಧ ಭೋಜರಾಜನು ಇವನೇ. ಆತನು ತನ್ನ ದೊಡ್ಡಪ್ಪನಾದ ಮುಂಜನ ವಧೆಯ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ, ಒಮ್ಮೆ ಕರ್ನಾಟಕದ ಮೇಲೆ ಆಕಸ್ಮಿಕವಾಗಿ ಎರಗಿ ಬಿದ್ದು, ಕರ್ನಾಟಕದ ದಂಡನ್ನು ಸೋಲಿಸಿನು ಅಷ್ಟರಲ್ಲಿ ಜಯಸಿಂಹನು ಸಿಂಹನಾದದಿಂದ ಆರ್ಭಟಿಸಿ ಬಂದು ಭೋಜನನ್ನು ಬೆಂಕೊಂಡು ಧಾರಾನಗರದವರೆಗೆ ಓಡಿಸಿಬಿಟ್ಟನು ಈ ಸೋಮೇಶ್ವರನು ಪಟ್ಟವೇರಿದೊಡನೆ ಮಾಳವ ದೇಶವನ್ನು ಒಳನುಗ್ಗಿ ಭೋಜನನ್ನು ಬೆನ್ನಟ್ಟಿ, ಆತನ ರಾಜಧಾನಿಯಾದ ಧಾರಾನಗರವನ್ನು ಮುತ್ತಿದನು ಭೋಜನು ನುಗ್ಗಾಗಿ ಬೆಂಗೊಟ್ಟೋಡಿ ಕಲಚೂರಿರಾಜನ ಆಶ್ರಯದಲ್ಲಿ ಹೋಗಿ ನಿಂತನು ಆಗ ಸೋಮೇಶ್ವರನು ಚೇದಿಯ ಕಲಚೂರಿ ಮನೆತನದ ಅರಸನಾದ ಕರ್ಣನ ಮೇಲೆ ಕೈಮಾಡಿದನು ಅವನ ರಾಜಧಾನಿಯಾದ ತ್ರಿಪುರ (ತೇವೂರು) ವನ್ನು ಸುತ್ತಿ ಲಗ್ಗೆಯಿಟ್ಟನು ಆಗ ಕರ್ಣನೂ ಭೋಜನೂ ಸೋಮೇಶ್ವರನಿಗೆ ಶರಣಾಗತರಾದರು ಹೀಗೆ, ಈ ಕಡುಗಲಿಯು ವಿಜಯಮಾಲೆಯನ್ನು ಕೊರಳಿನಲ್ಲಿ ಹಾಕಿಕೊಂಡು ತನ್ನ ದೇಶಕ್ಕೆ ಮರಳಿ ಬಂದನು

ಉತ್ತರದಲ್ಲಿ, ಈ ಪ್ರಕಾರವಾಗಿ ತೀವ್ರವೇ ಶಾಂತತೆಯುಂಟಾದರೂ ದಕ್ಷಿಣದಲ್ಲಿ ಉಂಟಾಗಲಿಲ್ಲ. ಚೋಳ ಚಾಳುಕ್ಯ ಇವೆರಡೂ ಸಾಮ್ರಾಜ್ಯಗಳು ಒಂದೇ ಕಾಲಕ್ಕೆ ಉದಯವಾದವು ಅವೆರಡೂ ಸಾಮ್ರಾಜ್ಯಗಳಿಗೆ ಪ್ರಬಲರಾದ ರಾಜರು ದೊರೆತುದರಿಂದ ಅವೆರಡೂ ಘನತೆಗೇರಿದವು ಕೊನೆಗೆ, ಅವೆರಡೂ ಬಹುಶಃ ಒಂದೇ ಕಾಲಕ್ಕೆ ಮುಳುಗಿದವು ಕಂಚೀಪಟ್ಟಣದಲ್ಲಿ ಹಿಂದಕ್ಕೆ ಆಳುತ್ತಿದ್ದ ತಮಿಳರಾದ ಪಲ್ಲವರಿಗೂ ಬಾದಾಮಿಯ ಚಾಳುಕ್ಯರಿಗೂ ತೀಕ್ಷ್ಣವಾದ ದ್ವೇಷವಿದ್ದಂತೆಯೇ, ಅವರ ತರುವಾಯದಲ್ಲಿ ಅವರ ಸ್ಥಳಕ್ಕೆ ಬಂದ ತಮಿಳರಾದ ಚೋಳರಿಗೂ ಕನ್ನ

ಡಿಗರಾದ ಚಾಳುಕ್ಯರಿಗೂ ಪ್ರಬಲ ವೈರವಿತ್ತು. ಇತ್ತ, ತೈಲಪನು
ರಾಷ್ಟ್ರಕೂಟರನ್ನೊತ್ತಿ ಚಾಳುಕ್ಯಧ್ವಜವನ್ನೆತ್ತಿದನು. ಅತ್ತ, ಚೋಳರ
ಚೂಡಾಮಣಿಯಾದ ರಾಜರಾಜನು ಕರ್ನಾಟಕವನ್ನು ಹೊಕ್ಕು ಗಂಗ
ಮನೆತನವನ್ನು ನುಂಗಿ ನೀರು ಕುಡಿದನು. ಆಗ, ಚಾಳುಕ್ಯರಿಗೂ ಚೋಳ
ರಿಗೂ ಕೈಗೆ ಕೈ ಹತ್ತಲೇಬೇಕಾಯಿತು. ಪ್ರಚಂಡರಾದ ಕಲಿಮಾರ್ತಂಡ
ರಿಂದ ಚಾಳುಕ್ಯ ಸಿಂಹಾಸನವು ಪ್ರಕಾಶಮಾನವಾದಂತೆಯೇ ಚೋಳ
ಪೀಠವೂ ರಾಜರಾಜ, ರಾಜೇಂದ್ರಚೋಳ, ರಾಜಾಧಿರಾಜರಂತಹ
ವಿಕ್ರಾಂತ ಕಂಠೀರವರಿಂದ ವಿರಾಜಮಾನವಾಯಿತು. ಸೋಮೇಶ್ವರನ
ಕಾಲದಲ್ಲಿ ಎಂದರೆ ೧೧ನೆಯ ಶತಮಾನದ ಮಧ್ಯದಲ್ಲಿ ಚಾಳುಕ್ಯಚೋಳರ
ನಡುವಿನ ಹಗೆತನವು ಪರಮಾವಧಿಯನ್ನು ಮುಟ್ಟಿತು. ಚೋಳರು
ಒತ್ತೊತ್ತಿ ಉತ್ತರಕ್ಕೆ ಸರಿಯಲಾರಂಭಿಸಿದರು. ಚಾಳುಕ್ಯರು ಅವರನ್ನು
ಕೆಳಕ್ಕೆ ದಬ್ಬಿದರು. ಕೃಷ್ಣಾತುಂಗಭದ್ರಾ ನದಿಗಳ ಬಣ್ಣೆಯಂಥ ಭೂಮಿಯ
ಮೇಲೆ ಎಲ್ಲರ ಕಣ್ಣು ಬಹಳ. ಆ ಪ್ರದೇಶವು ಕರ್ನಾಟಕದ ಇತಿಹಾಸ
ದಲ್ಲಿ ಅನೇಕ ಕಾಳಗಗಳ ಕಣವಾಗಿದೆ. ಸೋಮೇಶ್ವರನಿಗೂ ಚೋಳ
ರಿಗೂ ಆದ ಕದನಗಳೆಲ್ಲವೂ ಬಹುತರವಾಗಿ ಈ ಸೀಮೆಯಲ್ಲಿಯೇ ಆದವು.
ಒಂದು ಸಲ, ಚೋಳಅರಸನು ಚಾಳುಕ್ಯರ ರಾಜಧಾನಿಯಾದ ಕಲ್ಯಾಣದ
ವರೆಗೆ ನುಗ್ಗಿ ಅದನ್ನು ಸುಟ್ಟನು. ಗಂಗ ಪೆರ್ಮಾಡಿಯು ಕರ್ನಾಟಕ
ದಲ್ಲಿ ಕಟ್ಟಿಸಿದ ಅನೇಕ ಸುಂದರವಾದ ಜೈನಬಸ್ತಿಗಳಿಗೆ ಕಿಚ್ಚಿಕ್ಕಿ ಹಾಳು
ಮಾಡಿದನು. ಚೋಳ ಅರಸನಾದ ರಾಜಾಧಿರಾಜನು ಬಹಳ ದೊಡ್ಡ
ಗಂಡುಗಲಿಯಾಗಿದ್ದುದಲ್ಲದೆ ಅತ್ಯಂತಕ್ರೂರನೆಂದೂ ಖ್ಯಾತಿಗೊಂಡಿದ್ದನು.
ಆತನು ಪಾಂಡ್ಯಮಹೀಶನ ರುಂಡವನ್ನು ಖಂಡಿಸಿದ್ದನು, ಕೇರಳ ಧಾರು
ಣೀಶನನ್ನು ಮದವಾರಣದ ಕಾಲಿನಲ್ಲಿ ತುಳಿಸಿದ್ದನು, ಕೊಲ್ಲೀಪಾಕೆಗೆ
ಕೊಳ್ಳಿ ಇಟ್ಟಿದ್ದನು; ಸಿಂಹಳ ದ್ವೀಪದ ಧರಿತ್ರೀಕಾಂತನ ಹೆಂಡತಿಯನ್ನೂ
ತಂಗಿಯನ್ನೂ ಬಂಧನಗೊಳಿಸಿದ್ದನು, ಆತನ ತಾಯಿಯ ಮೂಗನ್ನು
ಕತ್ತರಿಸಿದ್ದನು, ಇಂತಹ ಕ್ರೂರನು ಕರ್ನಾಟಕದೊಳಗಿನ ಜೈನದೇವಾ
ಲಯಗಳನ್ನು ಸುಟ್ಟುದುದರ ಸೇಡು ತೀರಿಸಿಕೊಳ್ಳುವ ಸಲುವಾಗಿ ಸೋ

ಮೇಶ್ವರನು ಆತನೊಡನೆ ಭಯಂಕರವಾದ ಯುದ್ಧಗಳನ್ನು ಮಾಡಲು ಅನುವಾದನು  ರಾಜಾಧಿರಾಜನೂ ಅತುಲಸೈನ್ಯದೊಂದಿಗೆ ತುಂಗಭದ್ರಾ ತೀರದಲ್ಲಿರುವ ಕೊಪ್ಪಕ್ಕೆ ಬಂದನು. ತುಳಿತಕ್ಕೆ ನೆಲವು ಕುಸಿಯುವಂತೆಯೂ, ಆರ್ಭಟಕ್ಕೆ ದಿಕ್ಕುಗಳು ನಡಗುವಂತೆಯೂ, ಕೈದುಗಳ ಸೆಳೆತಕ್ಕೆ ಗಗನವು ಪ್ರಜ್ವಲಿಸುವಂತೆಯೂ ಎರಡೂ ಮಹಾಸೈನ್ಯಗಳು ಒಂದನ್ನೊಂದು ತುಡುಕಿ, ಕಡಂಗಿ ಕಾದಿದವು  ಕೋಡಿಯೊಡೆದು ರಕ್ತದ ಕಾಲುವೆಯು ಧಾವಿಸಿ ಹರಿಯಿತು  ಸುರಿಗೆಕಾಳಗದಲ್ಲಿ ಸುರಿಗೆಕಾರರು ಒಬ್ಬರನ್ನೊಬ್ಬರು ಮುಸಗಿ ತೊಡರಿಕೊಂಡರು  ಚಮೂಪತಿಗಳು ಚದರಿ ಹೋದರು  ಚದರಿ ಹೋದ ಚಮೂಪತಿಗಳು ಮತ್ತೆ ಏರಿ ಬಂದು, ಪೂತ್ಕರಿಸಿ ಮೈಗೆಮೈಗೊಟ್ಟು ಚಿಮ್ಮಿ ಝುಟತಿಯಿಂದ ಕಾದಿದರು. ಆನೆಕಾಳಗದಲ್ಲಿ ಆನೆ-ಆನೆಗಳು ಗಂಡಸ್ಥಳಗಳಿಂದ ಇರಿದಾಡಿ, ಸೊಂಡಿಲುಗಳಿಂದ ಮುರಿದಾಡಿ, ಕಾಲುಗಳಿಂದ ತೊತ್ತಳದುಳಿದಾಡಿ ಬಲಗಳನ್ನು ಭ್ರಮೆಗೊಳಿಸಿದವು. ಈ ದುರ್ಧರವಾದ ಕಾಳಗದಲ್ಲಿ, ಸೋಮೇಶ್ವರನು ರೌದ್ರ ಪರಾಕ್ರಮವನ್ನು ತೋರಿಸಿದನು  ರಾಜಾಧಿರಾಜನ ದಳವು ಆಹವಮಲ್ಲನ ಆರ್ಪಿಗೆ ಬೆಂಗೊಟ್ಟು ಓಡಿತು. ಶೂರನಾದ ಸೋಮೇಶ್ವರನು ಗಜಾರೂಢನಾಗಿ ತವಕದಿಂದ ಒಳನುಗ್ಗಿ, ಚೋಳಕಟಕವನ್ನು ಭೇದಿಸಿ ಸೂರೆಮಾಡಿ ರಾಜಾಧಿರಾಜನ ಸಮ್ಮುಖವನ್ನು ಸಾರ್ದನು  ಬ್ರಹ್ಮಾಸ್ತ್ರಕ್ಕೆ ಬ್ರಹ್ಮಾಸ್ತ್ರವೆರಗಿದಂತಾಯಿತು. ಇಬ್ಬರೂ ಕೈದುಗಳನ್ನು ಕೊಂಡು, ಒಬ್ಬರಿಗೊಬ್ಬರು ಸರಿಮಿಗಿಲೆಂಬಂತೆ ಉರುವಣೆಯಿಂದ ಕಾದಿದರು. ಸೋಮೇಶ್ವರನು ಕೊನೆಗೆ ಜಯಹೊಂದಿದನು. ಈ ಯುದ್ಧದಲ್ಲಿ ರಾಜಾಧಿರಾಜಚೋಳಿಕನು ಸತ್ತನು  ಕೂಡಲೆ, ಚೋಳ ಸೈನ್ಯವೆಲ್ಲವೂ ದಿಕ್ಕಾಪಾಲಾಗಿ ಹೋಯಿತು. ನಾಡುಬೀಡು ರಾಜ್ಯದ ಜನರೆಲ್ಲರೂ ಸೋಮೇಶ್ವರನನ್ನು ವೀರಾಧಿವೀರನೆಂದು ಒಂದೇ ಕೊರಳಿನಲ್ಲಿ ಕೊಂಡಾಡಿದರು. ಆಹವದಲ್ಲಿ ರಾಜಾಧಿರಾಜನ ತಮ್ಮನಾದ ರಾಜೇಂದ್ರನಿಗೂ ಗಾಯವಾಗಿತ್ತು. ಆದರೂ ರಾಜೇಂದ್ರದೇವನು ಆ ರಣಭೂಮಿಯಲ್ಲಿಯೇ ರಣಲಕ್ಷ್ಮಿಯ ರಕ್ತಕರಗಳಿಂದ ಮೂರ್ಧಾಭಿಷಿಕ್ತನಾಗಿ ಬಂದು ಸೋಮೇಶ್ವರನನ್ನು ಪುನಃ ಪ್ರತಿಭಟಿಸಿದನು. ರಾಜೇಂದ್ರದೇವನ ಉರುಬಿಗೆ

ಸೋಮೇಶ್ವರನ ಸೈನ್ಯವು ತಲ್ಲಣಿಸಿ ಹಿಮ್ಮೆಟ್ಟಿತು. ರಾಜೇಂದ್ರದೇವನು ಉತ್ತರಕ್ಕೆ ಕೊಲ್ಲಾಪುರದವರೆಗೆ ಹೋಗಿ ಅಲ್ಲಿ ಜಯಸ್ತಂಭವನ್ನು ನಿಲ್ಲಿಸಿದನು ಆದರೆ, ೫-೬ ವರ್ಷಗಳಲ್ಲಿ ರಾಜೇಂದ್ರದೇವನು ಮರಣಹೊಂದಿದನು. ಆತನ ತಮ್ಮನಾದ ವೀರರಾಜೇಂದ್ರಚೋಳನು ಅರಸನಾದನು. ಆತನೂ ಪ್ರಬಲ ಪರಾಕ್ರಮಿ ಆತನಿಗೂ ಸೋಮೇಶ್ವರನಿಗೂ ಅನೇಕ ಕಾಳೆಗಗಳೆಸಗಿದವು ಅವುಗಳಲ್ಲಿ, ಸೋಮೇಶ್ವರನ ಮಗನಾದ ವಿಕ್ರಮಾಂಕನು ತಂದೆಗೆ ಸಹಾಯಕನಾಗಿದ್ದನು ಮೂರನೆಯ ಸಲ, ಸೋಮೇಶ್ವರನು ಸ್ವಹಸ್ತದಿಂದ ಪತ್ರವನ್ನು ಬರೆದು ವೀರರಾಜೇಂದ್ರನ್ನು ಯುದ್ಧಕ್ಕೆ ಬರಬೇಕೆಂದು ಆಹ್ವಾನವನ್ನು ಕಳುಹಿಸಿದನು ಅದಕ್ಕೆ ಸಮ್ಮತಿಸಿ, ವೀರರಾಜೇಂದ್ರನು ಮಹಾಸೈನ್ಯದೊಂದಿಗೆ ತುಂಗಭದ್ರಾ ತೀರಕ್ಕೆ ಬಂದು ತಳಊರಿದನು ಆದರೆ, ಅಷ್ಟರಲ್ಲಿ ಸೋಮೇಶ್ವರನು ತೀಕ್ಷ್ಣವಾದ ಜ್ವರದಿಂದ ಪೀಡಿತನಾಗಿ ಮರಣಹೊಂದಿದನು.

ಸೋಮೇಶ್ವರನ ಮರಣವು ಅತ್ಯಂತ ಮನೋವೇಧಕವಾಗಿದೆ. ಮೇಲೆ ಹೇಳಿದಂತೆ, ಸೋಮೇಶ್ವರನು ಮೂರನೆಯ ಸಲ, ವೀರರಾಜೇಂದ್ರನಿಗೆ ಆಹವದ ಓಲೆಯನ್ನು ಕೊಟ್ಟು ತಾನು ಇನ್ನು ಯುದ್ಧಕ್ಕೆ ಹೊರಡುವವನಿದ್ದನು. ಅಷ್ಟರಲ್ಲಿ ಕುರವತ್ತಿಯಲ್ಲಿ ಆತನಿಗೆ ಜ್ವರವುಂಟಾಯಿತು. ಜ್ವರವು ದಿನ ದಿನಕ್ಕೆ ಏರುತ್ತ ನಡೆಯಿತು. ಮೈಮೇಲೆ ಎಳ್ಳಿಟ್ಟರೆ ಚಟ್ಟನೆ ಅರಳಾಗಿ ಹಾರುವಷ್ಟು ಆತನ ಮೈಯು ಕಾಯಿತು. ತಾನು ಆ ಜ್ವರದಲ್ಲಿ ಬದುಕುವುದಿಲ್ಲವೆಂದು ಸೋಮೇಶ್ವರನಿಗೆ ತೋಚಿತು ಹಾಸಿಗೆಯಲ್ಲಿ ನರಳುತ್ತ ಹೊರಳುತ್ತ ಸಂಕಟಪಟ್ಟು ಸಾಯುವುದಕ್ಕೆ ಸೋಮೇಶ್ವರನ ಮನಸ್ಸು ಒಪ್ಪಲಿಲ್ಲ. ಆದಕಾರಣ, ಆತನು ತನ್ನ ಧಾರ್ಮಿಕವಿಧಿಗಳನ್ನೆಲ್ಲ ಮುಗಿಸಿಕೊಂಡು, ತುಂಗಭದ್ರೆಯ ಜಲದಲ್ಲಿ ಇಳಿದನು. ಪರಮಾತ್ಮನನ್ನು ಧ್ಯಾನಿಸುತ್ತ ಮುಂದು ಮುಂದಕ್ಕೆ ಸಾಗಿದನು ನೀರು ಕುತ್ತಿಗೆಗೆ ಬಂದಿತು. ಅಲ್ಲಿ ಆತನು ಸ್ವಸ್ಥಚಿತ್ತದಿಂದ ಮುಳುಗಿ ಜಲಸಮಾಧಿಯನ್ನು ಹೊಂದಿದನು. ತುಂಗಭದ್ರೆಯು ಈ ಜಗದಧಿಪನನ್ನು ಪ್ರೀತಿಯಿಂದ ತನ್ನ ತೊಡೆಯಲ್ಲಿ ಮಲಗಿಸಿಕೊಂಡು ಆತನ ಯುದ್ಧ ಶ್ರಮವನ್ನೂ ಜ್ವರ

ತಾಪವನ್ನೂ ಹೋಗಲಾಡಿಸಿದೆಳು ಎರಡೂ ಕಡೆಗಳಲ್ಲಿ ನಿಂತು ಈ ಕೌತು ಕವನ್ನು ನೋಡುತ್ತಿರುವ ಆತನ ಪ್ರಜೆಗಳು ಆತನ ಗಂಭೀರ ಭಾವವನ್ನೂ ಶಾಂತವೃತ್ತಿಯನ್ನೂ ಧೈರ್ಯವನ್ನೂ ನೋಡಿ ಬೊಟ್ಟು ಕಚ್ಚಿದರು ಈ ರೀತಿಯಾಗಿ, ಈ ನರಾಧಿಪನು ಪರಮಯೋಗದಿಂದ ದೇಹವನ್ನು ತೊಲಗಿದನು!

ಸೋಮೇಶ್ವರನು ಅತ್ಯಂತ ಶೂರನು ಪ್ರವಿಮಳ ಕೀರ್ತಿಯಲ್ಲಿಯೂ ವಿಭವದಲ್ಲಿಯೂ ಸಚ್ಚರಿತ್ರೆಯಲ್ಲಿಯೂ ಆರ್ಜನಲ್ಲಿಯೂ ಮಹಾಹವ ಜಯ ದಲ್ಲಿಯೂ ಗುಣೋನ್ನತಿಯಲ್ಲಿಯೂ ಆಹವಮಲ್ಲನಿಗೆ ಆಗಿನ ಕಾಲದಲ್ಲಿ ಯಾರೂ ಸಮರಿರಲಿಲ್ಲ ಆತನಿಗೆ ಎರಗದ ವೀರರಿರಲಿಲ್ಲ, ಅಂಜದ ಅಧಟ ರಿರಲಿಲ್ಲ, ಶರಣೆನ್ನದ ರಾಯರಿರಲಿಲ್ಲ, ಯಮನ ಬಾರಿಗೆ ಹೋಗದ ಯುದ್ಧಲಾಲಸರಿರಲಿಲ್ಲ, ಮರಹೋಗದ ಲಂಕಚೇರಿಯರಿರಲಿಲ್ಲ ಇಳಿ ದೋಡದ ದುರ್ಗದ ಗಂಡರಿರಲಿಲ್ಲ, ದಳ್ಳಿಂದುರಿವ ರಿಪುಗಳಿರಲಿಲ್ಲ, ಆತನ ಆಳಿಕೆಯಲ್ಲಿ ಲಾಟ, ಕಳಿಂಗ, ಗಂಗ, ಕರಹಾಟ, ತುರುಷ್ಕ, ಸುರಾಷ್ಟ್ರ, ಮಾಳವ, ಕೇರಳ ಮುಂತಾದ ದೇಶಗಳ ಅರಸರು ಮಲೆತು ನಿಲ್ಲದ ಆತ ನಿಗೆ ಕಪ್ಪವನ್ನಿತ್ತು, ಆತನಿಂದ ನಿರ್ಮಿತವಾದ ಆಘಾಟದಲ್ಲಿಯೇ ಇರುತ್ತಿ ದ್ದರು ಆತನು ಮದ್ರ, ಅವಂತಿ, ವಂಗ, ದ್ರವಿಳ, ತುರುಷ್ಕ, ಸಾಭೀರ, ಪಾಂಚಾಳ ದೇಶಗಳ ಸೈನಿಕರನ್ನು ಪೇರೇಳಿಕೊಂದು ಕವರ್ದು ಅಸದಳ ವಾಗಿ ಕೋಟಿಜವನ್ನು ಕೈಕೊಂಡಿದ್ದನು ಇಷ್ಟಾದರೂ ಆತನ ತೋಳ ತೀಟೂ ಮನದ ತವಕವೂ ಹೋಗದೆ, ಆತನು ಹೊಸ ಹೊಸ ಯುದ್ಧ ಗಳನ್ನು ಹೂಡುವುದಕ್ಕೆ ಸದಾ ಲಾಲಸವುಳ್ಳವನಾಗಿದ್ದನು ಇಂತು ಚತುರಂಗ ಧಾತ್ರೀಕಾಂತೆಯನ್ನಳವಡಿಸಿ ಚಕ್ರವರ್ತಿಶ್ರೀಯನ್ನು ತಾನು ತಳೆದು, ವೈಭವದಿಂದ ರಾಜ್ಯವನ್ನಾಳಿ, ಕೊನೆಗೆ ಪರಮಯೋಗದಿಂದ ಜಲಸಮಾಧಿಯನ್ನೈದಿ ಮರಣ ಹೊಂದಿದನು ಆದಕಾರಣವೇ, ಸೋಮೇ ಶ್ವರನ ಆಳಿಕೆಯಲ್ಲಿ, ಚಾಳುಕ್ಯ ಸಾಮ್ರಾಜ್ಯವು ಬಹಳ ಗೌರವವನ್ನು ಪಡೆಯಿತು

ಚಕ್ರೇಶ್ವರಚೂಡಾಮಣಿಯಾದ

# ಚಾಲುಕ್ಯವಿಕ್ರಮ

---

(೧೦೭೬-೧೧೨೬)



ಕರ್ನಾಟಕದ ಎಲ್ಲ ಸಾರ್ವಭೌಮರಲ್ಲಿ ಚಾಲುಕ್ಯವಂಶದ ವಿಕ್ರಮ ದೇವನು ಅಗ್ರಗಣ್ಯನು, ಅತ್ಯಂತ ಪ್ರಸಿದ್ಧನು, ಅತೀವಲೋಕಪ್ರಿಯನು;

ಮಹಾಪ್ರತಾಪಶಾಲಿ. ಆತನು ೧೧ನೆಯ ಶತಮಾನದ ಕೊನೆಯಲ್ಲಿ ಪಟ್ಟವೇರಿ ಸುಮಾರು ೫೦ ವರುಷ ಕಲ್ಪನಾತೀತವಾದ ವೈಭವದಿಂದ ರಾಜ್ಯವಾಳಿದನು. ಆತನ ಆಳಿಕೆಯಲ್ಲಿ ಕರ್ನಾಟಕವು ಘನತೆಯ ಪರಮಾವಧಿಗೆ ಏರಿತ್ತು, ಶಾಂತತೆಯು ಸಂಪೂರ್ಣವಾಗಿ ನೆಲೆಗೊಂಡಿತ್ತು; ಮಹಾಲಕ್ಷ್ಮಿಯು ಚಾಂಚಲ್ಯವನ್ನು ತೊರೆದು ನಗುತ್ತ ಕೆಲೆಯುತ್ತ ನಲಿಯುತ್ತಿದ್ದಳು. ಆತನ ಬಾಹುಬಲದ ನೆರವು, ಆತನ ಅಣ್ಮು, ಆತನ ಉಗ್ರತೇಜಸ್ಫುರಿತ, ಆತನ ಆರ್ಪು, ಆತನ ಒರ್ಮಡಿಯ ನಿಲವು, ಆತನ ಊರ್ಜಿತಖ್ಯಾತಿಯ ಒಳ್ಪು, ಧರೆಗೆಲ್ಲಕ್ಕೂ ಆಶ್ಚರ್ಯಜನಕವಾಗಿದ್ದವು. ಆತನ ಕೀರ್ತಿವಲ್ಲರಿ ದಿಶಾಂತರದಲ್ಲಿ ತೆರಪಿಲ್ಲದೆ ಹಬ್ಬಿ ಪಲ್ಲವಿಸಿ ಹೂಬಿಟ್ಟು ಸೌಸವವನ್ನು ಸೂರೆಮಾಡಿತು, ಆತನ ಬಿಣ್ಪು ಉಪಮಾನಬಾಹ್ಯವಾಯಿತು, ಆತನ ಚರಿತೆಯು ಶಿಖಾಪದವನ್ನೈದಿತು, ಆತನ ಪರಾಕ್ರಮವು ಕಳಸವಿಟ್ಟಿತು. ಈ ವಿಕ್ರಮಭೂಪನ ಭುಜಬಲದಳವೂ ಧೀರತೆಯೂ ಶೂರತೆಯೂ ವಿಜಿಗೀಷುವೃತ್ತಿಯೂ ಲೋಕದಲ್ಲಿ ಅತ್ಯದ್ಭುತವೆನಿಸಿದವು. ಈ ಸೋಮವಂಶಲಲಾಮನು, ಈ ಚಾಳುಕ್ಯೋಜ್ವಳಲಕ್ಷ್ಮೀನಾಥನು ಕರ್ನಾಟಕದ ಅಖಿಲಚಕ್ರೇಶ್ವರರಲ್ಲಿ ಕಾಂತಿಮಯವಾದ ಚೂಡಾಮಣಿಯು.

ಪಟ್ಟವೇರುವ ಮುಂಚೆ ಹುಡುಗನಾಗಿರುವಾಗಲೇ ಈತನ ಶೌರ್ಯಶರಧಿಯು ಉಕ್ಕಿತ್ತು. ತಂದೆಯಾದ ಆಹವಮಲ್ಲ ಸೋಮೇಶ್ವರನು ಹೂಡಿದ ಕಾಳಗಗಳಲ್ಲಿ ಈತನು ತನ್ನ ತೋಳನ್ನು ಅವುಗಳಲ್ಲಿ ಚಾಚಿ ನರವಾಗಿದ್ದನು, ಅಲ್ಲದೆ ತಾನೊಬ್ಬನೇ ಹೆಗಲುಕೊಟ್ಟು ಸಮರಭಾರವನ್ನು ನಿರ್ವಹಿಸಿ ಜಯಶಾಲಿಯಾಗಿದ್ದನು. ತಂದೆಯ ಕಾಲದ ಈ ೨೫-೩೦ ವರುಷಗಳಲ್ಲಿ ಈತನ ಪರಾಕ್ರಮದ ಪ್ರಖ್ಯಾತಿಯು ಜಗತ್ತಿನ ಅಂಚನ್ನು ಮುಟ್ಟಿತ್ತು. ಈತನು ತನ್ನ ಅರಸೊತ್ತಿಗೆಯ ೫೦ ವರುಷಗಳಲ್ಲಿ ಅರಿಭೂಭೃದ್ವರ್ಗವನ್ನು ನುಗ್ಗಿ, ಕಂಟಕಕೋಟಿಗಳನ್ನು ಕಡಿದು, ಸಪ್ತಾಂಬುಧಿಸಂರುದ್ಧವಾದ ಧಾರುಣಿಯನ್ನು ತನ್ನ ದೋರ್ಬಲದಿಂದ ನೇರ್ಪಡಿಸಿ ಯಶಃಶ್ರೀಗೆ ಕೇಳೀಗೃಹಾಂಗಣವನ್ನಾಗಿ ಮಾಡಿದನು. ಹೀಗೆ ೮೦-[illegible]

ವರುಷ ಸತತವಾಗಿ ಭೂಚಕ್ರವನ್ನು ಬೆಳಗಿಸಿ ವಿಕ್ರಮಾರ್ಕನು ಕರ್ನಾಟಕ ಸಾಮ್ರಾಜ್ಯದ ವಿಸ್ತಾರವನ್ನು ಬೆಳೆಯಿಸಿ ಮೆರೆದನು

ಕರ್ನಾಟಕದ ಧರಿತ್ರೀಕಾಂತರಲ್ಲಿ ಬಾದಾಮಿಯ ವಿಖ್ಯಾತ ಪುಲಿಕೇಶಿಗೂ ಮಳಖೇಡದ ರಣವಿಗ್ರಹನಾದ ಗೋವಿಂದನಿಗೂ ರಣರಸಿಕನಾದ ಕಲ್ಯಾಣದ ಈ ವಿಕ್ರಮಾಂಕನಿಗೂ ಅನೇಕ ಸಂಗತಿಗಳಲ್ಲಿ ಸಾಮ್ಯವುಂಟು ಈ ಮೂವರೂ ತೀರ ಚಿಕ್ಕವರಿರುವಾಗಲೇ ತಮ್ಮ ಅನ್ಯಾದೃಶ ಶಕ್ತಿಯನ್ನು ತೋರ್ಪಡಿಸಿ ಪ್ರಜಾನುರಾಗಕ್ಕೆ ಪಾತ್ರರಾದರು ಪುಲಿಕೇಶಿಯು ಚಿಕ್ಕವನಿದ್ದರೂ ಲೋಕಪ್ರಿಯನಾಗಿದ್ದುದರಿಂದ, ತನ್ನ ಚಿಗಪ್ಪನಾದ ಮಂಗಳೇಶನನ್ನು ಮುರಿದೊತ್ತಿ ಸಿಂಹಾಸನವನ್ನಾಕ್ರಮಿಸಲು ಸಮರ್ಥನಾದನು ಉತ್ತುಂಗಮಲ್ಲನಾದ ಗೋವಿಂದನು ತೀರ ಸಣ್ಣವನಿದ್ದಾಗ ತಂದೆಯಾದ ಧ್ರುವನ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿದನು, ಆದ ಕಾರಣವೇ ಧ್ರುವನು ತನ್ನ ಹಿರಿಯ ಮಕ್ಕಳನ್ನು ಪಟ್ಟದಿಂದ ಹಾರಿಸಿ ಈ ಕಿರಿಯ ಮಗನನ್ನು ಯುವರಾಜನನ್ನಾಗಿ ಮಾಡಿದನು, ಇಷ್ಟೇ ಅಲ್ಲ, ಈ ಗೋವಿಂದನ ಗುಣಾರ್ಣವಕ್ಕೆ ಮೆಚ್ಚಿ ಆತನ ಸಲುವಾಗಿ ಧ್ರುವನು ತಾನು ಸ್ವತಃ ತನ್ನ ರಾಜಪದವಿಯನ್ನು ಬಿಟ್ಟು ಕೊಡಲು ಸಿದ್ಧನಾಗಿದ್ದನು ಹಾಗೆಯೆ ವಿಕ್ರಮಾದಿತ್ಯನು ಬಾಲಕನಿರುವಾಗಲೆ ತಂದೆಯಾದ ಸೋಮೇಶ್ವರನಿಗೆ ಅನೇಕ ಕೊಳುಗುಳಗಳಲ್ಲಿ ನೆರವಾಗಿ ಶೂರನೆಂದು ಖ್ಯಾತಿಗೊಂಡಿದ್ದನು ವಿಕ್ರಮದೇವನು ಅತ್ಯಂತ ಕುಶಲನು, ಮಾಂಡಲಿಕ ಪ್ರಿಯನು, ಪ್ರಜಾರಂಜಕನು ಅಂತೆಯೆ ಅಣ್ಣನಾದ ಎರಡನೆಯ ಸೋಮೇಶ್ವರನನ್ನು ತಳ್ಳಿ ಸಿಂಹಾಸನವನ್ನೇರುವುದು ಅವನಿಂದ ಸಾಧ್ಯವಾಯಿತು ಈ ಮೂವರಿಗೂ ಅವರವರ ಕಾಲದಲ್ಲಿ ನಿಸ್ಸೀಮಕಲಿಗಳಾದ ಶತ್ರುಗಳು ಗಂಟುಬಿದ್ದಿದ್ದರು ಪುಲಿಕೇಶಿಗೆ ಇದಿರಾಳಾದ ನರಸಿಂಹವರ್ಮನಂತಹ ರಣರಂಗಧೀರನೊಡನೆ ಹೋರಾಡಬೇಕಾಯಿತು, ಮೂರನೆಯ ಗೋವಿಂದನಿಗೆ ಶಿವಮಾರನಂತಹ ಸುಭಟನೊಡನೆ ಸೆಣಸಾಡಬೇಕಾಯಿತು; ಅದೇ ಮೇರೆಗೆ ಈ ಕುಂತಳೋರ್ವೀಶನ ಕಾಲದಲ್ಲಿ ಕಲಿತನದಿಂದಲೂ ಎದೆಗಾರಿಕೆಯಿಂದಲೂ ಚತುರತೆಯಿಂದಲೂ ಉತ್ತುಂಗನಾದ ಕುಲೋತ್ತುಂಗನೆಂಬ ಚೋಳ

ರಸನನ್ನು ಇದುರಿಸುವ ಪ್ರಸಂಗಬಂದಿತು ಈ ರೀತಿಯಾಗಿ ಈ ಮೂವರೂ ಕರ್ನಾಟಕ ಪೃಥ್ವೀಶರಲ್ಲಿ ಅಗ್ರಾಸನಾಸೀನರಾಗಿರುವರು

ವಿಕ್ರಮಾಭರಣನ ಬಾಲ್ಯಯೌವನಾವಸ್ಥೆಗಳ ೩೫ - ೪೦ ವರುಷಗಳೆಂದರೆ ಕದನಗಳ ಸುಗ್ಗಿ. ಚೋಳರಿಗೂ ಚಾಳುಕ್ಯರಿಗೂ ಇರುವ ಹಗೆತನವು ಆ ಅವಧಿಯಲ್ಲಿ ಬೆಳೆದು ಬಲಿದು ಫಲಿಸಿ ನಿಲವು ನಿಂತಿತ್ತು. ದಕ್ಷಿಣದಿಂದ ಮೇಲಕ್ಕೊತ್ತಿ ಬರುವ ಚೋಳರ ಕಲಿಮೇಳವನ್ನು ಕತ್ತಿಗೆ ಕೈಗೊಟ್ಟು ತರುಬುವುದೆ ವಿಕ್ರಮನ ತಂದೆಯ ಆಯುಷ್ಯದ ಮುಖ್ಯ ಇತಿಕರ್ತವ್ಯತೆಯಾಗಿತ್ತು. ಸೋಮೇಶ್ವರನು ಚೋಳರ ಹಾವಳಿಯನ್ನು ಹಿಂಗಿಸುವುದಕ್ಕೆ ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರದವರೆಗಿನ ಸೀಮಾಂತಪ್ರದೇಶದಲ್ಲಿ ಮೂರು ಭಾಗಗಳನ್ನು ಮಾಡಿದ್ದನು, ಒಂದೊಂದಕ್ಕೆ ತನ್ನ ಒಬ್ಬೊಬ್ಬ ಮಗನನ್ನು ದಂಡನಾಯಕನನ್ನಾಗಿ ನಿಯಮಿಸಿದ್ದನು ಇದರಿಂದ ಚೋಳ ಚಾಳುಕ್ಯ ಸಾಮ್ರಾಜ್ಯಗಳ ನಡುವೆ ಒಂದು ಅಭೇದ್ಯವಾದ ಗೋಡೆಯನ್ನೇ ಕಟ್ಟಿದಂತಾಗಿತ್ತು. ಚರಿತ್ರನಾಯಕನಾದ ವಿಕ್ರಮಾರ್ಣವನನ್ನು ನೊಳಂಬವಾಡಿಯ (ಚಿತ್ರದುರ್ಗ ಮುಂತಾದ ಪ್ರದೇಶ) ಅಧಿನಾಯಕನನ್ನಾಗಿ ನಿಯಮಿಸಿದ್ದನು. ಚೋಳರ ರೋಷದೃಷ್ಟಿಯು ಈ ನಾಡಿನ ಮೇಲೆಯೇ ಬೀಳುತ್ತಿತ್ತು. ಈ ಮೂಲಕವಾಗಿ ವಿಕ್ರಮನಿಗೆ ಚಿಕ್ಕಂದಿನಲ್ಲಿಯೇ ರಣರಂಗದ ಅನುಭವವು ಲಭಿಸಿತು. ಚೋಳರಾಜಾಧಿರಾಜನಿಗೂ ಸೋಮೇಶ್ವರನಿಗೂ ತುಂಗಭದ್ರಾತೀರದ ಕೊಪ್ಪದಲ್ಲಿ ಅತ್ಯುಗ್ರ ಸಂಗ್ರಾಮವೆಸಗಿತು. ಇದರಲ್ಲಿ ವಿಕ್ರಮನೂ ತಂದೆಯೊಂದಿಗೆ ಸಮರದೇವತೆಯ ಪೂಜೆಗೆ ತನ್ನ ಕೃಪಾಣಧಾರೆಯ ಜಲವನ್ನು ಎರೆದನು. ಇವರಿಬ್ಬರ ವಿಕ್ರಮತೀರ್ಥಾಭಿಷೇಕದಿಂದ ಭಯಂಕರ ರೂಪಿಣಿಯಾದ ಆ ರಣದೇವತೆಯ ಅಡಿಗಳಲ್ಲಿ ರಾಜಾಧಿರಾಜನು ಎರಗಿ ಪ್ರಾಣಕೊಟ್ಟನು. ಆ ಬಳಿಕ ಚೋಳಕ್ಷೋಣಿಗೆ ಒಡೆಯನಾದವನು ರಾಜಾಧಿರಾಜನ ತಮ್ಮ ರಾಜೇಂದ್ರ. ಈ ವೀರಾಗ್ರೇಸರನಿಗೂ ಸೋಮೇಶ್ವರನಿಗೂ ಇರಿದಾಟವಾದಾಗಳೆಲ್ಲ ವಿಕ್ರಮದೇವನೇ ಬಹುಶಃ ಕದನದ ಧುರೀಣತ್ವವನ್ನು ವಹಿಸಿದ್ದನು. ಚೋಳಚಾಳುಕ್ಯರ ವೈರವು ಇಷ್ಟರಿಂದಲೇ ಕೊನೆಮುಟ್ಟ

ಲಿಲ್ಲ ರಾಜೇಂದ್ರನ ತರುವಾಯ ೧೦೬೩ರಲ್ಲಿ ಚೋಳಸಿಂಹಾಸನಾಧೀಶ್ವರನಾದ ಭೀಮಪರಾಕ್ರಮಿ ವೀರರಾಜೇಂದ್ರನೂ ಈ ಹಗೆತನದ ಕುನಸನ್ನು ಬಿಡಲಿಲ್ಲ ಆತನು ಐದು ಸಾರಿ ಚಾಲುಕ್ಯರ ಮೇಲೆ ಬಲವೆತ್ತಿಬಂದನು ಸಮಬಲರಾದ ಮಹಾಬಲಿಗಳಲ್ಲಾದ ಆ ಭೀಕರಸಂಗರಗಳಲ್ಲಿ ವಿಕ್ರಮನೇ ಮುಖಂಡ ಆತನು ಅರಿನೃಪಾಲರನ್ನು ನುಂಗುವ ಕಾಲಮೃತ್ಯುವಿನಂತೆಯೂ ಆಹವದಡೆಗೆ ಬೀಸುವ ನಂಜಿನ ಬಿರುಗಾಳಿಯಂತೆಯೂ ಚೋಳರನ್ನು ಬೆಂಕೊಂಡು ತಿರುತಿರುವಿ ಕೆಡಹಿದನು ಒಂದೆರಡರಲ್ಲಿ ಚಾಳುಕ್ಯರು ಗೆದ್ದರು, ಒಂದೆರಡರಲ್ಲಿ ಚೋಳರಿಗೆ ಜಯವು ಸಿಕ್ಕಿತು

ಕೊನೆಗೆ ಸೋಮೇಶ್ವರನು ತನ್ನ ಕೈಬರಹದಿಂದ ವೀರರಾಜೇಂದ್ರನಿಗೆ ಯುದ್ಧದ ಆಹ್ವಾನಪತ್ರಿಕೆಯನ್ನು ಕಳುಹಿಸಿದನು ಕೃಷ್ಣಾ ತುಂಗಭದ್ರೆಗಳು ಒಂದನ್ನೊಂದು ಅಪ್ಪಿಕೊಂಡಿರುವ ಕೂಡಲ ಸಂಗಮವು ರಣಕ್ಷೇತ್ರವೆಂದು ಅದರಲ್ಲಿ ಸೂಚಿಸಿದ್ದನು ವೀರರಾಜೇಂದ್ರನು ಪಡೆಗೊಂಡು ನಡೆತಂದನು ಕೂಡಲಸಂಗಮದಲ್ಲಿ ಒಂದು ತಿಂಗಳವರೆಗೆ ಎದುರಾಳಿಯ ಹಾದಿಯನ್ನು ಕಾಯ್ದನು ಆದರೆ ತೀಕ್ಷ್ಣಜ್ವರಬಾಧೆಯಿಂದ ಸೋಮೇಶ್ವರನಿಗೆ ಬರಲಿಕ್ಕಾಗಲಿಲ್ಲ ಆತನು ಯುದ್ಧಭೂಮಿಯಲ್ಲಿ ಕುಣಿದಾಡುವ ಬದಲು ತುಂಗಭದ್ರೆಯ ತೊಡೆಯಲ್ಲಿ ಚಿರವಿಶ್ರಾಂತಿಯನ್ನು ಹೊಂದಿದ್ದನು ಚೋಳನು ಇನ್ನು ಮರಳುವವನಿದ್ದನು ಅಷ್ಟರಲ್ಲಿ ತಂದೆಯ ಸೇನಾರಥವನ್ನು ನಡೆಯಿಸಿಕೊಂಡು ವಿಕ್ರಮಾದಿತ್ಯನು ಬಂದನು. ಎರಡೂ ದಂಡುಗಳು ಒಂದನ್ನೊಂದು ಎರಗಿ, ಕೆನ್ನೀರಿನ ಹೊಳೆ ಹರಿಯತಕ್ಕುದಿತ್ತು ವಿಕ್ರಮನು ಚೋಳ ಸೈನ್ಯವನ್ನು ಕಲಕುವವನಿದ್ದನು. ವೀರರಾಜೇಂದ್ರನು ಚಾಳುಕ್ಯರ ದಂಡಿನ ದೂಳಹಾರಿಸುವವನಿದ್ದನು ಆ ಪ್ರದೇಶವೆಲ್ಲ ಪೆಣಮಯವಾಗುವುದಿತ್ತು ದೈವಲೀಲೆಯನ್ನು ನೋಡಿರಿ! ಒಮ್ಮೆಲೆ ಯುದ್ಧದೃಶ್ಯವು ಹೋಗಿ, ಅದರ ಬದಲು ಅಲ್ಲಿ ವಿವಾಹದೃಶ್ಯವಾಯಿತು, ರಣಮಂಟಪವು ಲಗ್ನಮಂಟಪವಾಯಿತು, ಒಬ್ಬರನೊಬ್ಬರು ತಕ್ಕೈ ಮುಕ್ಕೆಯಲ್ಲಿ ಹಿಚುಕಿ ಅಸುವನ್ನು ಹಿಂಡಲಣಿಯಾದ ವೀರರಿಬ್ಬರು

ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು ಒಬ್ಬರೊಬ್ಬರ ಹೃದಯವನ್ನು ಸೂರೆಗೊಂಡರು. ವೀರರಾಜೇಂದ್ರನ ಗೋಣ್ಮುರಿಯಲು ಚಾಚಿದ್ದ ವಿಕ್ರಮನ ಕೈಯು ಅವನ ಮಗಳ ಪಾಣಿಗ್ರಹಣವನ್ನು ಮಾಡಿತು! ಹೀಗಾಗುವುದಕ್ಕೆ ಆಗಿನ ಕಾಲದ ರಾಜಕಾರಣದ ವಿಲಕ್ಷಣ ಪರಿಸ್ಥಿತಿಯೂ ಕಾರಣವಾಗಿತ್ತು.

ಆಗಿನ ಕಾಲವಲ್ಲಿ ಚೋಳರಾಜ್ಯದಲ್ಲಿಯೂ ಕ್ರಾಂತಿ ನಡೆದಿತ್ತು, ಚಾಳುಕ್ಯ ರಾಜ್ಯದಲ್ಲಿಯೂ ಕ್ರಾಂತಿ ನಡೆದಿತ್ತು, ವೆಂಗಿರಾಜ್ಯದಲ್ಲಿಯೂ ಕ್ರಾಂತಿ ನಡೆದಿತ್ತು. ಚೋಳರಸನ ಮಗಳ ಮಗನಾದ ರಾಜೇಂದ್ರದೇವ ಅಥವಾ ಕುಲೋತ್ತುಂಗನು ಚೋಳರಾಜ್ಯದಲ್ಲಿ ತನ್ನ ಬಳಕನ್ನು ಕೆಡಹಬೇಕೆಂದಿದ್ದನು. ಆತನು ವೆಂಗಿಯ ಚಾಳುಕ್ಯವಂಶಜನು. ಆದರೆ ತಾಯಿಯ ತೌರುಮನೆಯಾದ ಚೋಳರಲ್ಲಿಯೆ ಬೆಳೆದಿದ್ದನು. ಆತನು ಉತ್ಕಟ ಮಹತ್ವಾಕಾಂಕ್ಷಿ. ಕೇವಲ ವೆಂಗಿಯನ್ನಾಳುವುದು ಆತನ ಮನಸ್ಸಿನಲ್ಲಿರಲಿಲ್ಲ. ತನ್ನ ಅಜ್ಜನ ಚೋಳ ಮಹಾಸಾಮ್ರಾಜ್ಯಕ್ಕೂ ಚಕ್ರವರ್ತಿಯಾಗಬೇಕೆಂದು ಆತನ ಹವಣಿಕೆ. ವೀರರಾಜೇಂದ್ರನು ವೆಂಗಿಯನ್ನು ತನ್ನ ಅಂಕಿತದಲ್ಲಿಟ್ಟುಕೊಂಡು ತನ್ನ ವಿಶ್ವಾಸದ ಮಾಂಡಲಿಕನನ್ನು ಅಲ್ಲಿ ನಿಯಮಿಸಬೇಕೆಂದಿದ್ದನು. ಅಥಾ೯ತ್ ಉತ್ತುಂಗಸಾಹಸಿಯಾದ ಕುಲೋತ್ತುಂಗನನ್ನು ವೆಂಗಿಯ ಪಟ್ಟದಲ್ಲಿರಿಸುವುದು ಆತನಿಗೆ ಬೇಡಾಗಿತ್ತು. ಅಂತು ವೆಂಗಿ ರಾಜ್ಯವನ್ನು ನುಂಗಬೇಕೆಂದು ಆತನ ಹೊಂಚು. ಇತ್ತ ವಿಕ್ರಮನ ತಂದೆಯು ತೀರಿದೊಡನೆಯು ಅಣ್ಣನಾದ ಎರಡನೆಯ ಸೋಮೇಶ್ವರನು ಕಲ್ಯಾಣದಲ್ಲಿ ಸಿಂಹಾಸನಾರೂಢನಾದನು. ಆದರೆ ಆತನು ಲೋಕಪ್ರಿಯನಾಗಿ ಅರಸುಗೈಯುತ್ತಿರಲಿಲ್ಲ. ಪ್ರಜೆಗಳಿಗೂ ಮಾಂಡಲಿಕರಿಗೂ ವಿಕ್ರಮನ ಒಡೆತನವು ಬೇಕಾಗಿತ್ತು. ಅಲ್ಲದೆ ವಿಕ್ರಮನ ವಿಕ್ರಮಕ್ಕೆ ಅಳುಕಿ ಸೋಮೇಶ್ವರನು ಹೊಟ್ಟೆಕಿಚ್ಚುಪಡುತ್ತಿದ್ದನು. ಈ ಎಲ್ಲಾ ಕಾರಣಗಳಿಂದ ಅಣ್ಣನನ್ನು ಸರಿಸಿ ತಾನು ಚಾಳುಕ್ಯ ಸಮ್ರಾಟನಾಗಬೇಕೆಂದು ವಿಕ್ರಮನ ಎಣಿಕೆ. ಹೀಗೆ ಚೋಳ ವೆಂಗಿ, ಮತ್ತು ಚಾಳುಕ್ಯ ಈ ಮೂರು ರಾಜ್ಯಗಳಲ್ಲಿ ಒಳಗಿಂದೊಳಗೆ ರಾಜಕಾರಣದ

ತಂತ್ರಗಳು ನಡೆದಿದ್ದವು ಒಬ್ಬರ ಸಹಾಯವನ್ನೊಬ್ಬರು ಅಪೇಕ್ಷಿಸು ತ್ತಿದ್ದರು ಕುಲೋತ್ತುಂಗನು ವೀರರಾಜೇಂದ್ರನ ಸಿರಿಯನ್ನಪಹರಿಸುವು ದಕ್ಕೆ ಚಾಳುಕ್ಯೇಂದ್ರನಾದ ಸೋಮೇಶ್ವರನನ್ನು ಕೂಡಿದುದು ಸಹಜ ವಾದ ಮಾತು ಏಕೆಂದರೆ "ಇಬ್ಬರ ನ್ಯಾಯ ಮೂರನಯವನಿಗೆ ಆಯ" ಎಂಬ ಹಾಗೆ ಚೋಳ ಚಾಳುಕ್ಯರ ವ್ಯಾಜ್ಯದಲ್ಲಿ ಕುಲೋತ್ತುಂಗನು ತನ್ನ ಮನೋರಥವನ್ನು ಸಿದ್ಧಿಗೊಯ್ಯಬಯಸಿದನು ಸೋಮೇಶ್ವರನಾದರೂ ತಮ್ಮನ ಆಟವನ್ನೂ ಚೋಳನ ಕಾಟವನ್ನೂ ಅಡಗಿಸುವುದಕ್ಕೆ ಅನು ಕೂಲವಾಗಿದ್ದ ಈ ಸಂಧಿಯನ್ನು ಕಳೆದುಕೊಳ್ಳಲಿಲ್ಲ, ಕುಲೋತ್ತುಂಗನ ಮೈತ್ರಿಗೆ ಒಪ್ಪಿಕೊಂಡನು ಇನ್ನುಳಿದ ವಿಕ್ರಮವೀರರಾಜೇಂದ್ರರಿಗೆ ಒಬ್ಬರಿಗೊಬ್ಬರ ನೆರವೇ ಗತಿಯಾಯಿತು ಗೃಹವೈರಿಯಾದ ಕುಲೋತ್ತುಂ ಗನು ಸೋಮೇಶ್ವರನನ್ನು ಕೂಡಿಕೊಂಡುದುದರಿಂದ ವೀರರಾಜೇಂದ್ರನು ವಿಕ್ರಮನೊಡನ ಗೆಳೆತನವನ್ನು ಇಚ್ಛಿಸಿದನು ಕುಲೋತ್ತುಂಗನ ಸಂಗಮ ದಿಂದ ಪ್ರಬಲನಾದ ಅಣ್ಣನಿಗೆ ಉಚ್ಚಾಟಣೆ ಕೊಡುವುದಕ್ಕೆ ವಿಕ್ರಮನು ಚೋಳನಸರವನ್ನು ಕೋರಿದನು ಹೀಗೆ ಇಬ್ಬರಲ್ಲಿಯೂ ಕಾದಾಟದ ವಿಚಾರ ಗಳಳಿದಿದ್ದುವು, ಆದುದರಿಂದಲೇ ಒಮ್ಮೆಲ ಯುದ್ಧ ನಿಂತುಹೋಯಿತು ವಿಕ್ರಮನು ಪರಾಕ್ರಮದಿಂದ ಈ ಮೊದಲೇ ವೀರರಾಜೇಂದ್ರನನ್ನು ಮೆಚ್ಚಿ ಸಿದ್ದನಾದುದರಿಂದ ಅಳಿಯನಾದನು ಈ ನಂಟತನದಿಂದ ಇಬ್ಬರೂ ಒಂದಾದರು ಈ ಬಗೆಯಾಗಿ ನಾಲ್ಕು ವೀರವಂಗಡಗಳು ಒಂದನ್ನೊಂದು ಸೇರಿ ಎರಡಾದವು ಚೋಳ ವೈರಿಯಾದ ಸೋಮೇಶ್ವರನನ್ನು ಕುಲೋ ತ್ತುಂಗನೂ ಚಾಳುಕ್ಯವಿರೋಧಿಯಾದ ವೀರರಾಜೇಂದ್ರನನ್ನು ವಿಕ್ರ ಮನೂ ಕೂಡಿಕೊಂಡು ವಿಲಕ್ಷಣವಾದ ಇತ್ತಂಡಗಳೇರ್ಪಟ್ಟವು.

ವೀರರಾಜೇಂದ್ರನೊಡನೆ ವಿಕ್ರಮನ ಶರೀರಸಂಬಂಧವಾದೊಡನೆಯೆ ಇಬ್ಬರೂ ವೆಂಗಿ ದೇಶಕ್ಕೆ ಹೋದರು ಅಲ್ಲಿಯ ರಾಜ್ಯಕಾರಭಾರದಲ್ಲಿ ಕ್ರಾಂತಿಯನ್ನು ಮಾಡಿದರು ಆ ರಾಜ್ಯಕ್ಕೆ ಕುಲೋತ್ತುಂಗನ ಕಕ್ಕನಾದ ವಿಜಯಾದಿತ್ಯನನ್ನು ಅಧಿರಾಜನನ್ನಾಗಿ ಮಾಡಿ ಮರಳಿ ಬಂದರು ಆದರೆ ಈ ವಿಜಯವು ಅವರಿಗೆ ದಕ್ಕಲಿಲ್ಲ ಏಕೆಂದರೆ ಮುಂದೆ ತುಸುದಿನಗಳಲ್ಲಿ

ವೀರರಾಜೇಂದ್ರನು ಮರಣ ಹೊಂದಿದನು, ಒಡನೆಯೆ ಚೋಳರಾಜ್ಯದಲ್ಲಿಯೂ ರಾಜ್ಯಕ್ರಾಂತಿಗೆ ಆರಂಭವಾಯಿತು ಆಗ ವಿಕ್ರಮನು ದಕ್ಷಿಣದೇಶದಲ್ಲಿಯ ಚಾಳುಕ್ಯ ಮಾಂಡಲಿಕರನ್ನು ತನ್ನ ಕಡೆಗೆ ಒಲಿಸಿಕೊಳ್ಳುವುದರಲ್ಲಿ ತೊಡಗಿದ್ದನು ಮಾವನ ಮರಣವನ್ನು ಕೇಳಿದೊಡನೆಯೆ ಹಿಡಿದ ಕೆಲಸವನ್ನು ಬಿಟ್ಟು ಆತನು ಕಂಚಿಗೆ ಹೋದನು ಅಲ್ಲಿಯ ರಾಜ್ಯವ್ಯವಸ್ಥೆಯನ್ನು ಸರಿಪಡಿಸಿ ವಿಕ್ರಮನು ತನ್ನ ಬೀಗನನ್ನು ಪಟ್ಟಕ್ಕೆ ಕುಳ್ಳಿರಿಸಿ ತನ್ನ ಕಾರ್ಯಕ್ಕೆ ಹಿಂತಿರುಗಿದನು ಆದರೆ ದೈವವು ವಿಕ್ರಮನಿಗೆ ಆಗ ಅನುಕೂಲವಾಗಿರಲಿಲ್ಲ ಚೋಳರಾಜ್ಯಕ್ರಾಂತಿಯಲ್ಲಿ ಆತನ ಬೀಗನು ಮೃತನಾದನು ಕುಲೋತ್ತುಂಗನಿಗೆ ತಾನಾಗಿ ಹೊತ್ತು ಸಾಧಿಸಿತು ಆತನು ಅನಾಯಾಸವಾಗಿ ಚೋಳಸಿಂಹಾಸನವನ್ನಾಕ್ರಮಿಸಿದನು ಆಗ ವಿಕ್ರಮನು ಚೋಳರಾಜ್ಯದ ಆಸೆಯನ್ನು ಬಿಟ್ಟುಕೊಟ್ಟು ತನ್ನ ಮುಖ್ಯೋದ್ದೇಶವಾದ ಚಾಳುಕ್ಯ ಸಾಮ್ರಾಜ್ಯ ಸಂಪಾದನೆಯ ಕಡೆಗೆ ಪ್ರಯತ್ನವನ್ನು ಹೊರಳಿಸಿದನು ಈಗ ಮಾತ್ರ ಅವನಿಗೆ ಅನುಕೂಲಗಾಳಿ ಬೀಸಿತು ಸೋಮೇಶ್ವರನ ಆಳಿಕೆಯಿಂದ ಜನರು ಬೇಸತ್ತಿದ್ದರು ವಿಕ್ರಮನೇನೋ ಆತನಿಗೆ ಅಣ್ಣನೆಂದು ಮಾನಕೊಡುತ್ತಿದ್ದನು ಆದರೆ ಜನರು ಹಾಗೆ ವರ್ತಿಸಲಿಕ್ಕೆ ಸಿದ್ಧರಿರಲಿಲ್ಲ ಮಾಂಡಲಿಕರಾಯರ ಪ್ರೇಮವೂ ವಿಕ್ರಮನ ಮೇಲೆ ವಿಶೇಷವಾಗಿತ್ತು ಆತನ ತಮ್ಮನಾದ ಜಯಸಿಂಹನೂ ವಿಕ್ರಮನ ಕಡೆಗೆಯೆ ಇದ್ದನು ಹೀಗೆ ಸರ್ವವಿಧದಿಂದಲೂ ವಿಕ್ರಮನ ದೈವವು ತೆರೆಯಿತು ಜನರಿಗೆ ಬೇಡಾದವರು ಎಷ್ಟು ದಿವಸ ಅರಸೊತ್ತಿಗೆಯಲ್ಲಿ ಮೆರೆಯಬಲ್ಲರು? ಸೋಮೇಶ್ವರನಿಗ ತನ್ನ ರಾಜ್ಯದಲ್ಲಿಯೇ ಎಲ್ಲೂ ಆಶ್ರಯ ದೊರೆಯಲಿಲ್ಲ ವಿಕ್ರಮನ ಶತ್ರುವಾದ ಕುಲೋತ್ತುಂಗನೊಡನೆ ಸೇರಿಕೊಂಡು ಸೋಮೇಶ್ವರನು ತನ್ನ ತಮ್ಮನನ್ನು ಹಣಿಯುವ ಒಳಸಂಚನ್ನು ಮಾಡಿದನು ರಾಜಧಾನಿಯಲ್ಲಿದ್ದರೆ ಕೇಡು ಸಂಭವಿಸೀತೆಂದು ವಿಕ್ರಮನು ಜಯಸಿಂಹನೊಡನೆ ಕಲ್ಯಾಣವನ್ನು ಬಿಟ್ಟು ತೆರಳಿದನು ಅವರನ್ನು ಕಟ್ಟಿ ತರುವುದಕ್ಕೆ ಸೋಮೇಶ್ವರನು ಸೈನ್ಯವನ್ನಟ್ಟಿದನು ಆ ವೀರ ಬಂಧುಗಳು ಅದನ್ನು ಕ್ಷಣಾರ್ಧದಲ್ಲಿ ತೋಳಕಸುವಿನಿಂದ ಗರಗರನೆ ಅರೆದಿಕ್ಕಿದರು. ಅವರುರುಬೆಗೆ ಸೈನಿಕರು ಅಳಿಮುಳಿದು ಬನ್ನಬಟ್ಟು ದಿಕ್ಕೆಟ್ಟು ಓಡಿದರು.

ವಿಕ್ರಮನಿಗೆ ಸಾಮಂತರೆಲ್ಲರ ಬೆಂಬಲವಿದ್ದುದರಿಂದ ಸೋಮೇಶ್ವರನಿಂದ ಆತನನ್ನು ಹಿಡಿಯುವುದಾಗಲಿಲ್ಲ ಅಷ್ಟರಲ್ಲಿ ವಿಕ್ರಮನು ದೊಡ್ಡದೊಂದು ಬಲವನ್ನು ಕೂಡಿಸಿ ತುಂಗಭದ್ರೆಯ ದಂಡೆಯಲ್ಲಿ ತಳವೂರಿದನು ಮಹಾ ವಾಹಿನೀಸಮೇತನಾಗಿ ಕುಲೋತ್ತುಂಗನು ದಕ್ಷಿಣದಿಂದ ಏರಿಬಂದನು ಅಸಂಖ್ಯಾನೀಕದಿಂದ ಪರಿವೃತನಾಗಿ ಸೋಮೇಶ್ವರನು ಉತ್ತರದಿಂದ ಮೇಲೆ ಬಿದ್ದನು, ಹೀಗೆ ವಿಕ್ರಮನು ಕತ್ತರಿಯ ಬಾಯಿಗೆ ಸಿಕ್ಕನು ಇಬ್ಬರ ಚಕ್ರಗಳನ್ನೂ ಒಮ್ಮೆಲೆ ಕತ್ತರಿಸಿ ಗೆದ್ದು ಪಾರಾಗುವುದು ಹೇಗೆಂಬ ವಿಚಾರಕ್ಕೂ ಆಗ ಅವಕಾಶವಿರಲಿಲ್ಲ ಕತ್ತರಿಯ ಎರಡೂ ಅಲಗುಗಳು ವಿಕ್ರಮನ ಮೇಲೆ ಒತ್ತರಿಸಿಬಂದಿದ್ದವು ಇಂತಹ ಇರುಕಿನಲ್ಲಿ ಸಿಕ್ಕರೂ ಆ ಧೀರ ವಿಕ್ರಮನು ತಿಲಮಾತ್ರವೂ ಎದೆಗೆಡಲಿಲ್ಲ ನಿಶ್ಶಂಕ ಪ್ರತಾಪನಾದ ಆತನು ಎರಡಕ್ಕೂ ಎದೆಗೊಟ್ಟು ನಿಲ್ಲಲು ಸಿದ್ಧನಾದನು

ವಿಕ್ರಮನು ಮೊದಲು ಕುಲೋತ್ತುಂಗನ ಸೈನ್ಯ ಶರಧಿಯ ಟಣ್ಣನ ಜಿಗಿದನು ಕುಲೋತ್ತುಂಗನ ಸುಭಟರು ಈತನನ್ನು ಮುಳುಗಿಸಲು ಒಟ್ಟಾಗಿ ಎಡೆವಿಡದೆ ತರೆಗಳಂತೆ ಹಾಯ್ದರು ವಿಕ್ರಮನ ನಿಶಿತಖಡ್ಗವು ಒಂದೊಂದೆ ಆಪೋಶನಕ್ಕೆ ಅವುಗಳನ್ನೆಲ್ಲ ಈಂಟಿತು ಎರಡೂ ಸೇನೆಗಳು ಒಂದನ್ನೊಂದು ಹೊಕ್ಕು ಹೆಣೆದುಕೊಂಡು ಹೋರಾಡಿದುವು ವಿಕ್ರಮನು ತೊಡಕುಗಳನ್ನು ಕಡಿಕಡಿದು ಕುಲೋತ್ತುಂಗನ ಬಳಿಸಾರಿ ಗರ್ಜಿಸಿದನು ಇಬ್ಬರ ವೀರಾವೇಶವೂ ಹೆಚ್ಚಿತು ಅವರು ರಭಸದಿಂದ ಕಾದಿದರು ಒಮ್ಮೆ ನಿಂದು ಕಾದಿದರು, ಒಮ್ಮೆ ಐತಂದು ಕೈದುಕೈದುಗಳಿಂದ ಕಾದಿದರು, ಒಮ್ಮೆ ಹೊಸ ಕುದುರೆಗಳನ್ನೇರಿ ಬಂದು ಕಾದಿದರು, ಒಮ್ಮೆ ತಮತಮಗೆ ಒದಗಿದ ಎಡಬಲದ ಪಡಿಬಲವನ್ನು ಕೊಂದು ಕಾದಿದರು, ಒಮ್ಮೆ ಖಡ್ಗಖಡ್ಗಗಳ ಹತಿಯಿಂದ ನೊಂದು ಕಾದಿದರು, ಒಮ್ಮೆ ಚಳಚಳಿ ಕೆಯಿಂದ ಸಲೆಸಂದು ಕಾದಿದರು ಬವರವಿಬ್ಬರಿಗೂ ಸರಿಯಾದುದನ್ನು ಕಂಡು ವಿಕ್ರಮನ ಕೋಪವು ದ್ವಿಗುಣಿತವಾಯಿತು ಆತನು ಮೀರಿದ ಪರಾಕ್ರಮದಿಂದ ಕುಲೋತ್ತುಂಗನ ಧ್ವಜಚ್ಛತ್ರಚಾಮರಗಳನ್ನೂ ಚತುರಂಗ ಸೇನೆಯನ್ನೂ ಸವರಿ ಕೈದುಗಳನ್ನು ತರಿದು ಮೈಯ್ಯನ್ನು ಇರಿದು

ನೋಯಿಸಿದನು ಕುಲೋತ್ತುಂಗನು ಪರಿಭವಹೊಂದಿ ಕಂಚಿಯವರೆಗೆ ಒಂದೇ ಉಸುರಿನಿಂದ ಓಡಬೇಕಾಯಿತು ಕೂಡಲೆ ವಿಕ್ರಮನು ಹೊಡೆ ಮರಳಿ ಸೋಮೇಶ್ವರನ ಸೇನಾಕಾನನವನ್ನು ಒಳನುಗ್ಗಿದನು ಸೋಮೇಶ್ವರನ ದಂಡು ಈತನ ಮೇಲೆ ಕ್ರೂರಜಂತುಗಳಂತೆ ಅವಗಡಿಸಿ ಮುತ್ತಿ ಬಂದಿತು ವಿಕ್ರಮನ ಕೋಪಾಟೋಪವು ಕಾಳ್ಕಿಚ್ಚಿನಂತೆ ಭುಗಿಭುಗಿಲೆಂದು ಅವರೆಲ್ಲರನ್ನು ಸುಡತೊಡಗಿತು ಅವನಿವನ ಪಡೆವಳರು ಮಸವತ್ತ ಕೂರ್ಗತ್ತಿಗಳನ್ನು ತೆಗೆತೆಗೆದು ಹೊಡೆದಾಡಿದರು ತನಿವೀರರಸದ ಪ್ರವಾಹವು ಮೇಲುಕ್ಕಿ ಹರಿಯಿತೋ ಎಂಬಂತೆ ನೆತ್ತರು ಸುರಿಯಿತು ಇತ್ತಂಡದ ಪಟುಭಟರು ಒಬ್ಬರನ್ನೊಬ್ಬರು ಒತ್ತೊತ್ತಿ ಹೊಡೆದರು. ಒಬ್ಬರೊಬ್ಬರ ಅಸಿಗಳನ್ನು ಅಸಿಗಳಿಂದ ಕತ್ತರಿಸಿದರು, ಒಬ್ಬರೊಬ್ಬರಲ್ಲಿ ನಾಟಿಸಿದ ಆಯುಧಗಳನ್ನು ಕಿತ್ತಿದರು, ಒಬ್ಬರಿಂದೊಬ್ಬರು ಗಾಯವಡೆದು ಬವಳಿಗೊಂಡು ಮತ್ತ ಚೇತರಿಸಿಕೊಂಡು ಕೈಗೆಡದ ಜಡಿದು ಮೊಬ್ಬಿಟ್ಟರು ಹೀಗೆ ಆ ಸಮರಧುರಂಧರರಿಬ್ಬರ ಪಡೆಗಳ ಅಗ್ಗಳಿಕೆಯಿಂದ ಆ ಹುಯ್ಲು ಭೀಕರವಾಯಿತು ವಿಕ್ರಮನು, ಚಂಡಕಿರಣನ ತೇಜಕ್ಕಿಂತಲೂ ಉಗ್ರವಾದ ಪರಾಕ್ರಮದಿಂದ ಪರಸೈನ್ಯವನ್ನು ಪೆರಗಿಕ್ಕಿ ಎಡೆಗೊಡದಟ್ಟಿ ಕೊಂದನು ಈ ಅರಾತಿಸಂಹಾರಲಯಾಗ್ನಿಯನ್ನು ಸೋಮೇಶ್ವರನಂತಹ ಪ್ರತಾಪಸಮುದ್ರನಿಂದಲೂ ನಂದಿಸುವುದಾಗಲಿಲ್ಲ ಸೋಮೇಶ್ವರನ ಅಧರ್ಮಕ್ಕೆ ಮುನಿದು ಯಮಧರ್ಮನೇ ದಂಡವನ್ನೆತ್ತಿ ಬಂದನೋ ಎಂಬಂತೆ ವಿಕ್ರಮಾದಿತ್ಯನ ಆಹವಪ್ರೌಢಿಯು ಮೆರೆಯಿತು ಸೋಮೇಶ್ವರನ ಕೈತವಕವು ಕುಂದಿತು ವಿಕ್ರಮನು ಆತನನ್ನು ಸೆರೆಹಿಡಿದನು ಹೀಗೆ ೨೫-೩೦ ವರುಷ ನಿರಂತರವಾಗಿ ಶೌರ್ಯವನ್ನು ತೋರಿಸಿ, ಮಲೆಪರ ಪೊಂಗನ್ನು ಅಡಗಿಸಿ, ಮನ್ನೆಯರ ಉರ್ಕನ್ನು ಕಳಚಿ, ಅನ್ಯಮಂಡಳಿಕರ ದರ್ಪವನ್ನು ಓಗಡಿಸಿ ತ್ರಿಭುವನಮಲ್ಲನಾಗಿ ಕಲ್ಯಾಣದಲ್ಲಿ ಚಾಳುಕ್ಯ ಸಿಂಹಾಸನವನ್ನೇರಿದನು (೧೦೭೬) ತಮ್ಮನಾದ ಜಯಸಿಂಹನನ್ನು ಬನವಾಸಿ ಪ್ರಾಂತಕ್ಕೆ ನಿಯಮಿಸಿದನು

ಇಷ್ಟರಲ್ಲಿ ವಿಕ್ರಮಾದಿತ್ಯನ ಕೀರ್ತಿಯು ದಿಗ್ದೇಶಗಳನ್ನು ವ್ಯಾಪಿಸಿತ್ತು. ಆತನನ್ನು ಇದಿರಾಗುವವರು ಯಾರೂ ಉಳಿಯಲಿಲ್ಲ. ಚಾಳುಕ್ಯ ಸಾಮ್ರಾ

ಜ್ಯದೊಳಗಿನ ಮಾಂಡಲಿಕರೆಲ್ಲರೂ ಆತನ ಒಡೆತನವನ್ನು ಆನಂದದಿಂದ ಮನ್ನಿಸಿದರು. ದೇವಗಿರಿಯ ಯಾದವರೂ ಹಾನಗಲ್ಲು ಗೋವೆ ಹಲಸಿಗೆಗಳ ಕದಂಬರೂ ಸವದತ್ತಿ ಬೆಳಗಾವಿಗಳ ರಟ್ಟರೂ ಉತ್ತರ ದಕ್ಷಿಣ ಕೊಂಕಣಗಳ ಶಿಲಾಹಾರರೂ ಹೊಯ್ಸಳರೂ ಮುಂತಾದ ಸಾಮಂತ ರಾಜರೆಲ್ಲರೂ ವಿಕ್ರಮದೇವನೇ ತಮ್ಮ ಚಕ್ರವರ್ತಿಯೆಂದು ಜಯಜಯಕಾರವನ್ನು ಮಾಡಿದರು. ವಿಕ್ರಮನು ಸಕಲ ವಿಬುಧಜನ ಸಂಸ್ತುತನಾದನು. ನಿಖಿಲ ಪ್ರಜಾಹ್ಲಾದಕರನಾದನು. ಇಂತು ಅಖಂಡಕುಂತಳಭೂಚಕ್ರಕ್ಕೆ ಏಕಾಧಿಪತಿಯಾಗಿ ತನ್ನ ಪಟ್ಟಬಂಧೋತ್ಸವದ ಕುರುಹೆಂದು, ತನ್ನ ಶಕವನ್ನಾರಂಭಿಸಿದನು. ಅಂದಿನಿಂದ ಕರ್ಣಾಟಕದಲ್ಲಿ ಶಕವರುಷವನ್ನು ಮಾಣಿಸಿ ವಿಕ್ರಮ ವರುಷವೇ ಪ್ರರೂಢವಾಗಿ ವಿರಾಜಿಸಿತು. ಆತನ ತರುವಾಯವೂ ಎಷ್ಟೋ ವರುಷ ಚಾಳುಕ್ಯ ವಿಕ್ರಮ ವರುಷವು ಪ್ರಚಾರದಲ್ಲಿದ್ದು ಮುಂದಿನ ಚಾಳುಕ್ಯ ದೊರೆಗಳು ದುರ್ಬಲರಾದುದರಿಂದ ನಿಂತುಹೋಯಿತು.

ವಿಕ್ರಮಾದಿತ್ಯದೇವನ ಆಯುಷ್ಯದ ವಿಶೇಷವೇನೆಂದರೆ ಆತನು ಹೂಡಿದ ಕದನಕಲ್ಲೋಲವೂ ತೋರಿಸಿದ ಅನಾದೃಶವಾದ ಸಾಹಸವೂ ಪಟ್ಟ ದುರ್ಧರಸಂಕಟಗಳೂ ಸಿಂಹಾಸನಾರೋಹಣವಾದೊಡನೆಯೆ ಕೊನೆಗಂಡವು. ಮುಂದೆ ಆತನು ೫೨ ವರುಷ ಅವ್ಯಾಹತವಾಗಿ ರಾಜ್ಯವಾಳಿದರೂ ಯುದ್ಧಸಂದರ್ಭಗಳೇ ವಿಶೇಷವಾಗಿ ಉಂಟಾಗಲಿಲ್ಲ. ಚೋಳರಾಜ್ಯದಲ್ಲೊಮ್ಮೆ ಪ್ರವೇಶಿಸುವ ಪ್ರಸಂಗಮಾತ್ರ ಬಂದಿತ್ತು. ಹೀಗೆ ಆತನು ಗತಶತ್ರುವಾಗಿ ಶಾಂತತೆಯಿಂದ ರಾಜ್ಯಭಾರವನ್ನು ಕೈಕೊಂಡಿದ್ದನು. ಅನ್ಯಸಾಮ್ರಾಜ್ಯದ ಮಹಾರಾಜರ ಒಡ್ಡೋಲಗದಲ್ಲಿಯೂ ಈತನ ಯಶೋಗಾನದ ಇಂಪು ಇಡುಗಿತ್ತು. ಪರರಾಜ್ಯಗಳ ಅವನೀಶರು ದುರ್ಘಟ ಪ್ರಸಂಗಗಳಲ್ಲಿ ವಿಕ್ರಮನ ಆಸರವನ್ನು ಮೇಲಿಂದ ಮೇಲೆ ಕೇಳುತ್ತಿದ್ದರು. ಉತ್ತರದ ಮೇರೆಯಲ್ಲಿ ನರ್ಮದೆಯೂ ದಕ್ಷಿಣದ ಮೇರೆಯಲ್ಲಿ ತುಂಗಭದ್ರೆಯೂ ಚಾಳುಕ್ಯರಾಜ್ಯಕ್ಕೆ ಅಗಳತೆಯಾಗಿದ್ದವು. ಮಾಳವೆ ಚೇದಿ ಪ್ರಾಂತಗಳಲ್ಲಿ ಆಗ ರಾಜ್ಯಕ್ರಾಂತಿಯು ನೈದೋರುತ್ತಿತ್ತು. ಧಾರಾ

ಮತ್ತು ದಾಹಲೆಯ ಅರಸರು ವಿಕ್ರಮಾದಿತ್ಯನ ಪಡೆಯ ನೆರವನ್ನು ಬೇಡಿದರು ಈತನು ಬಲ್ಬಂಟರಾದ ದಂಡನಾಯಕರೊಂದಿಗೆ ನರ್ಮದೆಯನ್ನು ದಾಟಿ ಹೋದನು ಇವನಿಂದ ಅವರಿಬ್ಬರಿಗೂ ಒಳ್ಳೆಯ ಸಹಾಯವಾಯಿತು ಅಲ್ಲಿ ಕ್ರಾಂತಿಗಳನ್ನು ಹಿಂಗಿಸಿ ಆ ರಾಜ್ಯಗಳನ್ನು ವಿಕ್ರಮನು ಸುರಕ್ಷಿತವಾಗಿರಿಸಿದನು ಮುಂದೆ ಬಂಗಾಲ ಆಸಾಮ ಪ್ರಾಂತಗಳ ಪೃಥ್ವೀಶರೂ ಈತನ ಬೆಂಬಲವನ್ನಪೇಕ್ಷಿಸಿದರು ಅಲ್ಲಿಯವರಗೂ ಹೋಗಿ ಕರ್ನಾಟಕದ ವಿಕ್ರಮ ವೈಭವವನ್ನೂ ಶ್ರೀ ವೈಭವವನ್ನೂ ಪ್ರಕಾಶಪಡಿಸಿ ವಿಕ್ರಮನು ಜನ್ಮಭೂಮಿಗೆ ಬಂದನು

ನಡುವೆ, ಹೊಯ್ಸಳರು ಮಾತ್ರ ಸಾಮ್ರಾಜ್ಯದ ಸಿಲವುಗೆಡಿಸಬೇಕೆಂದು ಹವಣಿಸಿದರು ಹೊಯ್ಸಳರಲ್ಲಿ ವಿಷ್ಣುವರ್ಧನನು ದಿನದಿನಕ್ಕೆ ಪ್ರಬಲನಾಗುತ್ತ ನಡೆದಿದ್ದನು ಆತನು ಚೋಳರನ್ನೋಡಿಸಿ ಗಂಗವಾಡಿಯನ್ನು ತನ್ನ ನಾಡಿಗೆ ಕೂಡಿಸಿಕೊಂಡಿದ್ದನು ಆದರ, ಆತನು ವಿಕ್ರಮಾದಿತ್ಯನು ತನ್ನ ಚಕ್ರವರ್ತಿಯೆಂದು ಒಪ್ಪಿಕೊಂಡನು ವಿಕ್ರಮಾಂಕನಿಗೆ ಅಚ್ಚುಗಿ ಮುಂತಾದ ಶೂರ ದಳವಾಯಿಗಳ ಸಹಾಯವಿದ್ದುದರಿಂದಲೂ, ಆತನ ಶೌರ್ಯಕ್ಕೆ ರಿಪುಗಳು ಗಡಗಡನೆ ನಡುಗುತ್ತಿದ್ದುದರಿಂದಲೂ, ವಿಕ್ರಮಾಂಕನು ೯೦--೯೫ ವರ್ಷಗಳ ಮುಪ್ಪಿನವನಾಗಿದ್ದರೂ ಆತನ ಮೇಲೆ ತಿರುಗಿ ಬೀಳುವುದಕ್ಕೆ ಯಾರೂ ಧೈರ್ಯಪಡಲಿಲ್ಲ ಇದಲ್ಲದೆ ಆತನು ಯಾತಗಿರಿ, ವಿಜಾಪುರ, ವಿಕ್ರಮಪುರ, ಬಳ್ಳಿಗಾಂವಿ ಮುಂತಾದ ಪಟ್ಟಣಗಳನ್ನು ಉಪರಾಜಧಾನಿಗಳನ್ನಾಗಿ ಮಾಡಿಕೊಂಡು ಪ್ರಸಂಗವಿಶೇಷಗಳಲ್ಲಿ ಅಲ್ಲಿಂದ ರಾಜ್ಯಕಾರಭಾರವನ್ನು ನಡಿಸಿ, ರಾಜ್ಯದಲ್ಲಿ ಸದಾ ಶಾಂತತೆಯನ್ನು ಕಾಯ್ದುಕೊಂಡನು ವಾರಾಶಿಪರ್ಯಂತವಾದ ಧರೆಯೆಲ್ಲವನ್ನು ಏಕಛತ್ರದಿಂದ ಆಳಿ, ದುರ್ವಿನೀತರಾದ ಅವನೀಪಾಳರ ಬೇರನ್ನು ಕಿತ್ತು, ಗಲಗಲನೆ ನೀರೊಳಗೆ ಈಡಾಡಿ ಈ ವಿಕ್ರಮಾದಿತ್ಯದೇವನು ತನ್ನ ವಿಕ್ರಾಂತದ ಬಲ್ಪಿನಿಂದ ಮೆರೆದನು

## ವೀರಮಾರ್ತಾಂಡನಾದ

# ವಿಷ್ಣುವರ್ಧನ

---

## (೧೧೦೬-೧೧೪೧)

ಮನುಷ್ಯನು ಪರಮಾವಧಿ ಉನ್ನತವಾದ ಸ್ಥಿತಿಯನ್ನೈದಿದ ಕಾಲವೇ ಬಹುಶಃ ಆತನ ನೀಚಸ್ಥಿತಿಯ ಪ್ರಾರಂಭದ ಕಾಲವು ರಾಷ್ಟ್ರವು ಕೂಡ ಅತ್ಯಂತ ವೈಭವ ಶಿಖರಕ್ಕೆ ತಲುಪಿತೆಂದರೆ, ಮುಂದೆ ಅದಕ್ಕೆ ಏರಲು ಅವಕಾಶವಿಲ್ಲದುದರಿಂದಲೋ ಏನೋ ಅದು ಹಿಂತಿರುಗಿ ಕೆಳಗಿಳಿಯಲಾರಂಭಿಸುತ್ತದೆ ಲಕ್ಷ್ಮಿಯು ಚಂಚಲಳಿದ್ದಂತೆ ವೈಭವವೂ ಚಂಚಲ, ಅದಕ್ಕೆ ಬಹಳ ಕಾಲ ಒಂದಪಡೆಗೆ ಕಾಲಿಟ್ಟು ಗೊತ್ತಿಲ್ಲ ಶ್ರೇಷ್ಠನಾದ ಮಹಾಪುರುಷನೊಬ್ಬನು ತನ್ನ ಬಾಹುಬಲದಿಂದ ರಾಜ್ಯವನ್ನು ವೈಭವ ಶಿಖರಕ್ಕೆ ತಲುಪಿಸಿದನೋ ಇಲ್ಲವೋ ಅಷ್ಟರಲ್ಲಿ, ಆ ವಂಶದಲ್ಲಿ ದುರ್ಬಲರಾದ ಅರಸರು ಹುಟ್ಟಿ, ಅದರ ಇಳಿಗಾಲಕ್ಕೆ ಮೊದಲು ಮಾಡುತ್ತಾರೆ ರಾಷ್ಟ್ರಕೂಟ ವಂಶದ ನೃಪತುಂಗನು ಅರವತ್ತುನಾಲ್ಕು ವರ್ಷ ವೈಭವದಿಂದ ರಾಜ್ಯವಾಳಿ ಮಡಿದನು ಆತನ ವಂಶದಲ್ಲಿ ಮುಂದೆ ತೀವ್ರವೇ ನಾಲ್ಕನೆಯ ಗೋವಿಂದನಂಥ ಅರಸರು ಹುಟ್ಟಿದ್ದರಿಂದ ೬೦ - ೭೦ ವರ್ಷಗಳೊಳಗೆ ರಾಷ್ಟ್ರಕೂಟ ರಾಜ್ಯವು ಮಣ್ಣುಪಾಲಾಯಿತು ಹಾಗೆಯೇ ಕುಂತಳೋರ್ವೀಶನಾದ ವಿಕ್ರಮಾಂಕದೇವನು ೫೨ ವರ್ಷ ವಿಜೃಂಭಣೆಯಿಂದ ರಾಜ್ಯವಾಳಿ ಮಡಿದ ಕೂಡಲೆ, ಚಾಳುಕ್ಯರ ಮನೆತನಕ್ಕೆ ನೀಚಸ್ಥಿತಿಯು ಬರಲಾರಂಭಿಸಿತು ಈ ಸಂದರ್ಭದಲ್ಲಿ ಹೊಯ್ಸಳವಂಶದ ವಿಷ್ಣುವರ್ಧನನು

ಹುಟ್ಟಿ, ತನ್ನ ತೇಜದಿಂದಲೂ ದರ್ಪದಿಂದಲೂ ನೆರೆಯ ರಾಜ್ಯಗಳನ್ನು ಗೆದ್ದುಕೊಂಡು, ಹೊಯ್ಸಳ ವಂಶವನ್ನು ಸ್ವಾತಂತ್ರ್ಯಪಥಕ್ಕೆ ಹಚ್ಚಿದನು ಚಾಲುಕ್ಯ ವಿಕ್ರಮನ ಆಳಿಕೆಯಲ್ಲಿಯೇ ಸಾಮ್ರಾಜ್ಯವನ್ನು ಒಳಗಿಂದೊಳಗೆ ಕೊರೆದು ತಿನ್ನುವ ಹುಳಗಳು ಹುಟ್ಟಿದ್ದವು ಈ ಹುಳಗಳೆಂದರೆ, ವಿಕ್ರಮನ ಮಂಡಲಿಕ ಅರಸರು ವಿಕ್ರಮನು ಅತುಲವಾದ ರಾಜ್ಯ ಸಂಪತ್ತಿಯನ್ನು ಸಂಪಾದಿಸಿದುದು ತನ್ನಲ್ಲಿ ಅಪಾರವಾದ ನಂಬುಗೆಯನ್ನಿಟ್ಟು, ಸಂಕಟ ಸಮಯದಲ್ಲಿ ತನಗೋಸ್ಕರ ತಮ್ಮ ನತ್ತರವನ್ನು ಬಸಿದ ತನ್ನ ದಳವಾಯಿಗಳ ಬಲದಿಂದ ಆದುದರಿಂದ, ವಿಕ್ರಮನು ತನ್ನ ದಂಡನಾಯಕರಿಗೆ ಮಂಡಲೇಶ್ವರ ಪದವಿಯನ್ನಿತ್ತು ಅವರಿಗೆ ತಮ್ಮ ತಮ್ಮ ರಾಜ್ಯದಲ್ಲಿ ವಿಶೇಷವಾದ ಅಧಿಕಾರಗಳನ್ನು ಕೊಟ್ಟು, ಮನ್ನಿಸಿದನು ಹೀಗೆ, ಆತನು ಅವರಲ್ಲಿ ಇಟ್ಟ ಹೆಚ್ಚಿನ ವಿಶ್ವಾಸವೇ ಆತನ ತರುವಾಯದಲ್ಲಿ, ಸಾಮ್ರಾಜ್ಯಕ್ಕೆ ಮೃತ್ಯುವಾಗಿ ಪರಿಣಮಿಸಿತು ವಿಕ್ರಮನ ಪ್ರಬಲವಾದ ಪುಣ್ಯಪ್ರಭಾವದ ಮೂಲಕ, ಆತನಿಗೆ ಆ ಕೇಡುಗಾಲವನ್ನು ನೋಡುವ ಪ್ರಸಂಗವು ಪ್ರಾಪ್ತವಾಗಲಿಲ್ಲ ವಿಕ್ರಮಾದಿತ್ಯನ ತರುವಾಯ ಪಟ್ಟಕ್ಕೆ ಬಂದ ಅರಸರು ದುರ್ಬಲರಾಗಿರುವ ಸಂಧಿಯನ್ನು ಸಾಧಿಸಿ, ಮಾಂಡಲಿಕರು ತಮ್ಮ ತಮ್ಮ ರಾಜ್ಯದಲ್ಲಿ ಸ್ವತಂತ್ರರಾಗಿ ಆಳದೊಡಗಿದರು ವಿಷ್ಣುವರ್ಧನನೂ ಹೀಗೆ ಸ್ವತಂತ್ರರಾದವರಲ್ಲೊಬ್ಬನು ಆದರೆ ಈತನ ವಿಷಯದಲ್ಲಿ ಒಂದು ವಿಶೇಷ ಉಂಟು ಅದೇನೆಂದರೆ, ವಿಷ್ಣುವರ್ಧನನಾಗಲಿ, ಆತನ ವಂಶಜರಾಗಲಿ ಕೊನೆಯವರೆಗೆ ಚಾಳುಕ್ಯರ ಮೇಲೆ ತಿರುಗಿಬಿದ್ದು ತಾವು ಚಕ್ರವರ್ತಿಗಳೆಂದೆನಿಸಿಕೊಳ್ಳಲಿಲ್ಲ, ತಾವು ಚಾಳುಕ್ಯ ಚಕ್ರವರ್ತಿಗಳ ಮಹಾಮಂಡಲೇಶ್ವರರೆಂದೇ ತಮ್ಮನ್ನು ಕರೆದುಕೊಂಡರು ಮುಂದೆ, ಯಾವಾಗ ಚಾಳುಕ್ಯ ವಂಶವು ಕಲಚೂರಿಯ ಅರಸನಾದ ಬಿಜ್ಜಳನಿಂದ ಗ್ರಸ್ತಮಾಡಲ್ಪಟ್ಟು, ಆ ವಂಶವು ಕೂಡ ಬಹಳ ದಿವಸ ಬಾಳದ ನಷ್ಟವಾಯಿತೋ ಆಗ ಮಾತ್ರ ಹೊಯ್ಸಳರು ತಾವು ಚಕ್ರವರ್ತಿಗಳೆಂದು ಹೇಳಿಕೊಂಡರು

ಆದರೆ, ಹೀಗೆ ಹೆಸರಿಗೆ ಮಾಂಡಲಿಕರಾಗಿದ್ದರೂ ವಸ್ತುತಃ ಅವರು ತಮ್ಮ ರಾಜ್ಯದಲ್ಲಿ ಸ್ವತಂತ್ರರೇ ಆಗಿದ್ದರು ವಿಷ್ಣುವರ್ಧನನು ೧೨ನೆಯ

ಶತಮಾನದ ಆರಂಭಕ್ಕೆ ಹೊಯ್ಸಳ ಸಿಂಹಾಸನವನ್ನೇರಿದಾಗ, ಹೊಯ್ಸಳ ವಂಶವು ಸ್ಥಾಪಿತವಾಗಿ ಸುಮಾರು ಒಂದು ನೂರು ವರ್ಷಗಳಾಗಿದ್ದುವು ವಾಸಂತಿಕಾದೇವಿಯ ವರಪ್ರಸಾದದಿಂದಲೂ ತನ್ನ ಜೈನ ಗುರುವಿನ ಪ್ರೇರಣೆಯಿಂದಲೂ ಸಳನು ಚಿಕ್ಕದೊಂದು ರಾಜ್ಯವನ್ನು ಕಟ್ಟಿದ ಬಳಿಕ, ವಿನಯಾದಿತ್ಯ ಎರಯಂಗರಂತಹ ಶೂರಪುರುಷರು ಹುಟ್ಟಿ, ಹೊಯ್ಸಳ ರಾಜ್ಯವನ್ನೂ ಕೀರ್ತಿಯನ್ನೂ ಹಬ್ಬಿಸಿದರು ಚಾಳುಕ್ಯರಿಗೂ ಚೋಳರಿಗೂ ಆದ ಅನೇಕ ಸಂಗರಗಳಲ್ಲಿ ಕನ್ನಡಿಗರಾದ ಹೊಯ್ಸಳರು ಸ್ವಾಭಾವಿಕವಾಗಿ ಚಾಳುಕ್ಯರಿಗೆ ಬೆಂಬಲರಾಗಿ ಯುದ್ಧಮಾಡುತ್ತಿದ್ದರು ಅಲ್ಲದೆ ಹೊಯ್ಸಳರು ಚಾಳುಕ್ಯರೊಡನೆ ಶರೀರಸಂಬಂಧವನ್ನೂ ಬೆಳೆಸಿದ್ದರು ವಿಕ್ರಮಾಂಕನ ತಂದೆಯಾದ ಆಹವಮಲ್ಲ ಸೋಮೇಶ್ವರನು ಹೊಯ್ಸಳ ವಂಶದ ಹೆಣ್ಣನ್ನು ಮದುವೆಯಾಗಿದ್ದನು ವಿಷ್ಣುವರ್ಧನನ ಅಜ್ಜನಾದ ವಿನಯಾದಿತ್ಯನು ಚಾಳುಕ್ಯ ವಿಕ್ರಮನಿಗೆ ಅನೇಕ ಕದನಗಳಲ್ಲಿ ನೆರವಾಗಿ ಪ್ರಬಲಿಗ ಬಂದನು ವಿಷ್ಣುವರ್ಧನನ ತಂದೆಯಾದ ಎರೆಯಂಗನು ಅರಸನಾಗದೆ ತೀರಿಕೊಂಡರೂ ವಿನಯಾದಿತ್ಯನ ಆಳಿಕೆಯಲ್ಲಿಯೇ ಚಾಳುಕ್ಯ ವಿಕ್ರಮನಿಗೆ ನೆರವಾಗಿ, ಆತನ ಪ್ರೀತಿ ವಿಶ್ವಾಸಗಳಿಗೆ ಪಾತ್ರನಾಗಿದ್ದನು ಆತನ ಕಾಲದಲ್ಲಿ ಹೊಯ್ಸಳರ ರಾಜ್ಯವಿಸ್ತಾರವು ದೊಡ್ಡದಿರಲಿಲ್ಲ ಕಡೂರ ಜಿಲ್ಲೆಯೂ ಅದರ ನೆರೆಯ ಪ್ರದೇಶವೂ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೂ ಮಾತ್ರವೇ ಅವರ ವಶದಲ್ಲಿದ್ದುವು ಚಿಕ್ಕದಾದ ಈ ರಾಜ್ಯವನ್ನ ವಿಸ್ತರಿಸಿ, ಪೂರ್ವಕ್ಕೆ ಮುಳಬಾಗಿಲದ ಹತ್ತಿರದ ನಂಗಲಿಯವರೆಗೂ ದಕ್ಷಿಣಕ್ಕೆ ಕೊಂಗು ಮತ್ತು ಆನಮಲೆಗಳವರಗೂ ಎಂದರೆ ಈಗಿನ ಸೇಲಂ, ಕೊಯಿಮತ್ತೂರ ಮತ್ತು ತ್ರಾವಣಕೋರಗಳವರೆಗೂ ಪಶ್ಚಿಮಕ್ಕೆ ಬಾರಕೂರವರೆಗೂ, ಉತ್ತರಕ್ಕೆ ಬೆದುರ್ಗರ ಎಂದರ ಕೃಷ್ಣಾನದಿಯವರೆಗೂ ಹಬ್ಬಿಸಿದ ಶ್ರೇಯವು ನಮ್ಮೀ ಚರಿತ್ರನಾಯಕನಿಗೆ ಇರುತ್ತದೆ ವಿಷ್ಣುವರ್ಧನನ ತಂದೆಯಾದ ಎರೆಯಂಗನು ಚಾಳುಕ್ಯ ಭೂಪಾಲನಿಗೆ ಬಲಗೈಯಂತಿದ್ದನು ಆತನು ಮಾಳವರನ್ನು ಸೋಲಿಸಿ, ಧಾರಾನಗರವನ್ನು ಸುಟ್ಟು ಬೂದಿ ಮಾಡಿ ಚೋಳನನ್ನು ಎಳೆದು, ಸುಲಿದು ಅತ್ಯಂತ ಪ್ರಖ್ಯಾತನಾಗಿದ್ದನು ವಿಷ್ಣುವರ್ಧನನ ಅಣ್ಣನಾದ ಮೊದಲನಯ

ಬಲ್ಲಾಳನು ಬಹಳ ದಿವಸ ಬಾಳಲಿಲ್ಲ, ಆಳಲಿಲ್ಲ. ವಿಷ್ಣುವರ್ಧನನು ಸಿಂಹಾಸನವನ್ನೇರಿದಾಗ, ವಿಕ್ರಮದೇವನು ಮುಪ್ಪಿನ ಮುದುಕನು. ಅದನ್ನು ನೋಡಿ, ಬಿಟ್ಟಿಗನು ಅಥವಾ ವಿಷ್ಣುವರ್ಧನನು ಆತನ ವಿರುದ್ಧವಾಗಿ ಬಂಡನ್ನೆಬ್ಬಿಸಲು ಮೊದಲು ಹವಣಿಸಿದನು. ಆದರ ಆ ಮುದುಕನು ಈತನ ಆಟವನ್ನು ಸಾಗಗೊಡಲಿಲ್ಲ. ಆ ಬಳಿಕ ಶ್ರೀ ರಾಮಾನುಜಾಚಾರ್ಯರು ಚೋಳ ಅರಸರ ಉರುವಣಿಯನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ಹೊಯ್ಸಳ ರಾಜ್ಯಕ್ಕೆ ಬಂದು ಈ ಬಿಟ್ಟಿಗ ದೇವನನ್ನು ಆಶ್ರಯಿಸಿದರು. ಅವರ ಉಪದೇಶದಿಂದ ಬಿಟ್ಟಿಗದೇವನು ಶ್ರೀ ವೈಷ್ಣವ ಮತವನ್ನು ಸ್ವೀಕರಿಸಿ ಶ್ರೀ ವೈಷ್ಣವನಾದನು. ತನ್ನ ಗುರುಗಳಾದ ಶ್ರೀ ರಾಮಾನುಜಾಚಾರ್ಯರಿಗ ಚೋಳರು ಕೊಟ್ಟ ಪೀಡೆಯು ವಿಷ್ಣುವರ್ಧನನ ಹೃದಯದಲ್ಲಿ ಕಿಚ್ಚಿಟ್ಟಿತು. ಅಲ್ಲದ, ಹಿಂದಕ್ಕೆ ಗಂಗರಾಳಿದ ಮೈಸೂರು ದೇಶದ ಭಾಗವು ಚೋಳ ಅರಸರಿಗೆ ಅಧೀನವಾಗಿದ್ದುದರಿಂದ, ಆ ಗಂಗವಾಡಿಯ ಜನರು ಚೋಳರ ದಾಸ್ಯದಲ್ಲಿ ತೊಳಲಾಡುತ್ತಿದ್ದರು. ಇದೆಲ್ಲವನ್ನೂ ನೋಡಿ ವಿಷ್ಣುವರ್ಧನನು ಚೋಳ ಅರಸರನ್ನು ಸದಬಡೆದು ಗಂಗವಾಡಿಯನ್ನು ಪಾರತಂತ್ರ್ಯದಿಂದ ಮುಕ್ತವನ್ನಾಗಿ ಮಾಡಬಯಸಿದನು, ಅದನ್ನು ತನ್ನ ರಾಜ್ಯದಲ್ಲಿ ಸೇರಿಸಿಕೊಳ್ಳುವುದೇ ವಿಷ್ಣುವರ್ಧನನ ಮುಖ್ಯ ಗುರಿಯಾಯಿತು. ವಿಷ್ಣುವರ್ಧನನ ಸುದೈವದಿಂದ ಆತನಿಗೆ ಗಂಗಮನೆತನದವನಾದ ಗಂಗರಾಜನೆಂಬೂಬ್ಬ ಶೂರದಳವಾಯಿಯು ದೊರತಿದ್ದನು. ಆತನು ಚೋಳ ರಾಜ್ಯವನ್ನು ಒಳನುಗ್ಗಿ ವಿಧ್ವಸ್ತ ಮಾಡಿ, ತನ್ನ ಗಂಗರಾಜ್ಯದ ರಾಜಧಾನಿಯಾದ ತಳಕಾಡನ್ನು ಚೋಳರಿಂದ ಸಳೆದುಕೊಂಡನು ಮತ್ತು ಕೂಡಲೆ, ಒಂದರ ಮೇಲೊಂದು ಪ್ರದೇಶಗಳನ್ನು ಚೋಳರಿಂದ ಕಸಿದುಕೊಂಡು, ಗಂಗವಾಡಿಯಿಂದ ಎಂದರ ಮೈಸೂರು ಪ್ರಾಂತದಿಂದ ಚೋಳರನ್ನು ಸಂಪೂರ್ಣವಾಗಿ ಓಡಿಸಿ, ಗಂಗವಾಡಿಗೆ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟನು. ಇಷ್ಟಾದರೂ ಗಂಗರಾಜನು ತಾನು ಅರಸನಾಗಬಯಸಲಿಲ್ಲ. ತಾನು ಗೆದ್ದ ಯಾವತ್ತು ಪ್ರದೇಶಗಳನ್ನು ಈ ಸ್ವಾಮಿಭಕ್ತನು ತನ್ನೊಡೆಯನ ಅಡಿದಾವರಗಳಲ್ಲಿ ಸಮರ್ಪಿಸಿದನು. ವಿಷ್ಣುವರ್ಧನನ ಮತ್ತೊಬ್ಬ ಧೀರದಂಡನಾಯಕನಾದ ಪುಣಿಸನೆಂಬವನು ನೀಲಗಿರಿ ಮತ್ತು

ಮಲಬಾರ ಪ್ರಾಂತಗಳ ಮೇಲೆ ದಂಡೆತ್ತಿ ಹೋಗಿ, ನೀಲಗಿರಿ ಪರ್ವತದೊಳಗಿರುವ ತೊಡವರನ್ನು ಗೆದ್ದು, ಅದನ್ನು ಹೊಯ್ಸಳ ರಾಜ್ಯಕ್ಕೆ ಕೂಡಿಸಿದನು ಹೀಗೆ ವಿಷ್ಣುವರ್ಧನನ ದಳವಾಯಿಗಳು ದಕ್ಷಿಣ ದೇಶಗಳನ್ನು ಗೆಲ್ಲುತ್ತಿರುವಾಗ, ವಿಷ್ಣುವರ್ಧನನು ಉತ್ತರದಲ್ಲಿ ನೊಳಂಬವಾಡಿಯ ಪಾಂಡ್ಯರನ್ನು ಸೋಲಿಸಿ, ಅಭೇದ್ಯವಾದ ಉಚ್ಚಂಗಿದುರ್ಗದ ಕೋಟೆಯನ್ನು ಪರಮಸಾಹಸದಿಂದ ಕೈವಶಮಾಡಿಕೊಂಡನು ವಿಷ್ಣುವರ್ಧನನು ದುಮ್ಮೆ ಎಂಬಲ್ಲಿ ಪಾಂಡ್ಯರನ್ನು ಪೂರ್ಣವಾಗಿ ಸೋಲಿಸಿದನು ತನ್ನ ಕಂಭೋಜದ ಕುದುರೆಯನ್ನೇರಿ ಗಂಧಗಿರಿಯನ್ನು ಗೆದ್ದನು ತುಳವರನ್ನು ತನ್ನ ಆಧಿಪತ್ಯಕ್ಕೆ ಅಧೀನಪಡಿಸಿಕೊಂಡು ಮರಳಿ ತನ್ನ ರಾಜಧಾನಿಯಾದ ಹಳಬೀಡು ಅಥವಾ ದ್ವಾರಸಮುದ್ರಕ್ಕೆ ಬಂದನು ಆಗ ಜಗದೇಕನೆಂಬವನು ದೊಡ್ಡ ಸೈನ್ಯದೊಂದಿಗೆ ದ್ವಾರಸಮುದ್ರವನ್ನು ಮುತ್ತಿದ್ದನು ವಿಷ್ಣುವರ್ಧನನು ಆ ಮುತ್ತಿಗೆಯನ್ನು ಕಿತ್ತು, ರಾಜಧಾನಿಯನ್ನು ಭಯಂಕರವಾದ ಗಂಡಾಂತರದಿಂದ ಉಳಿಸಿಕೊಂಡನು ಆ ಬಳಿಕ ವಿಷ್ಣುವರ್ಧನನು ಬನವಾಸಿಗೆ ದಂಡೆತ್ತಿ ಹೋಗಿ, ಚಾಳುಕ್ಯ ಅರಸನಾದ ಸೋಮೇಶ್ವರನನ್ನು ಸೋಲಿಸಿ, ಮುಂದಕ್ಕೆ ಸಾಗಿ, ಹಾನಗಲ್ಲ ಕೋಟೆಯನ್ನು ಹಿಡಿದುಕೊಂಡನು ಹೀಗೆ, ಆತನು ಅನೇಕ ದೇಶಗಳನ್ನೂ ಕೋಟೆಗಳನ್ನೂ ತೆಗೆದುಕೊಂಡದ್ದರಿಂದ, ಆತನಿಗೆ ಮಲೆಪರೊಳು ಗಂಡ, ಶ್ರೀಮತ್ ತ್ರಿಭುವನಮಲ್ಲ ತಳಕಾಡು-ಕೊಂಗು-ನಂಗಲಿ-ನೊಳಂಬವಾಡಿ ಉಚ್ಚಂಗಿ-ಬನವಾಸಿ-ಹಾನಗಲ್ಲ-ಗೊಂಡ, ಭುಜಬಲವೀರಗಂಗ ಹೊಯ್ಸಳದೇವನೆಂಬ ಬಿರುದುಗಳು ಪ್ರಾಪ್ತವಾದವು ಸಾರಾಂಶ, ಈ ಸಿಂಹವು ತಳಕಾಡಿನಲ್ಲಿ ಸುಳಿದಾಡಿ, ಉಚ್ಚಂಗಿಕೋಟೆಯೆಂಬ ಮದ್ದಾನೆಯನ್ನು ಸೀಳಿ, ಅನಾಕುಳ ಚಿತ್ತದಿಂದ ಬನವಾಸಯ ಬದಿಯಿಂದ ನಡೆದು, ಆರ್ಪಿನಿಂದ ಬಳವಲನ್ನು ತೆಗೆದುಕೊಂಡು, ಹಾನಗಲ್ಲಿನಮೇಲೆ ಕಾಲಿಟ್ಟು, ಆನಂದದಿಂದ ಕೃಷ್ಣಾತಟಾಕಕ್ಕೆ ಜಗಿಯಿತು ವಿಷ್ಣುವರ್ಧನನು ಉತ್ತರದೇಶಕ್ಕೆ ಮಾಳವೆಯ ಕಡೆಗೆ ಕೂಡ ಹೋಗಿದ್ದನು ಚಕ್ರಕೂಟದ ರಾಣಿಯಾದ ಮಾಣಿಕ್ಯದೇವಿಯ ಮುಂದೆ ತನ್ನ ಶೌರ್ಯವನ್ನು ಪ್ರದರ್ಶಿಸಿದನು. ಅಷ್ಟರಲ್ಲಿ ಚಾಳುಕ್ಯ ಚಕ್ರವರ್ತಿಯಾದ ವಿಕ್ರಮದೇವನು ತೀರಿಕೊಂಡಿ

ದ್ದನು ಆಗ, ವಿಷ್ಣುವರ್ಧನನಿಗೆ ತನ್ನ ರಾಜ್ಯವನ್ನು ಬೆಳಿಸುವುದಕ್ಕೆ ಮತ್ತಷ್ಟು ಅವಸರವು ದೊರೆಯಿತು ಆತನು ಪುಲಿಗೆರೆ ಎಂದರೆ ಲಕ್ಷ್ಮೇಶ್ವರವನ್ನೂ ಹಲಸಿಗೆಯನ್ನೂ ತೆಗೆದುಕೊಂಡನು ಬಂಕಾಪುರವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ೧೧೪೧ ರಲ್ಲಿ ಅದೇ ಊರಲ್ಲಿ ಮರಣ ಹೊಂದಿದನು ಆತನ ಶವವು ಮನೆತನದ ಮೂಲ ಊರಾದ ಸೊಸೆಯೂರ ಅಥವಾ ಶಶಕಪುರಕ್ಕೆ ಒಯ್ಯಲ್ಪಟ್ಟು ಅಲ್ಲಿ ದಹನ ಮಾಡಲ್ಪಟ್ಟಿತು

ಈ ರೀತಿಯಾಗಿ ವಿಷ್ಣುವರ್ಧನನು ಹೊಯ್ಸಳವಂಶದ ಪೊಗಳಯನ್ನೂ ನಗಳ್ತೆಯನ್ನೂ ಮಿತಿಮೀರಿ ಹೆಚ್ಚಿಸಿ, ಕರ್ನಾಟಕರ ಪ್ರಖ್ಯಾತ ಅರಸರುಗಳಲ್ಲೊಬ್ಬನಾಗಿ ಮೆರದು ಮರಣ ಹೊಂದಿದನು



# ಭೀಮಪರಾಕ್ರಮಿಯಾದ

# ವೀರಬಲ್ಲಾಳ

---

## (೧೧೭೩-೧೨೨೦)

ಈ ವೀರಬಲ್ಲಾಳನು ವಿಷ್ಣುವರ್ಧನನ ಮೊಮ್ಮಗನು ಈತನು ಹೊಯ್ಸಳ ವಂಶದ ಅರಸರಲ್ಲಿ ಎಲ್ಲರಿಗಿಂತ ಶ್ರೇಷ್ಠನಾದ ಅರಸನು ಈತನ ಆಳಿಕೆಯಲ್ಲಿ ಹೊಯ್ಸಳ ಸಾಮ್ರಾಜ್ಯವು ಪರಮಾವಧಿ ಘನತೆಯನ್ನು ಹೊಂದಿತು ಈತನು ಪಟ್ಟಕ್ಕೆ ಬರುವ ಪೂರ್ವದಲ್ಲಿ, ಚಾಳುಕ್ಯ ರಾಜಧಾನಿಯಾದ ಕಲ್ಯಾಣದಲ್ಲಿ ಭಯಂಕರವಾದ ರಾಜಕ್ರಾಂತಿಯೂ ವಿಲಕ್ಷಣವಾದ ಧರ್ಮಕ್ರಾಂತಿಯೂ ನಡೆದವು ಬಿಜ್ಜಳನೆಂಬ ಚಾಳುಕ್ಯಮಂತ್ರಿಯು ಚಾಳುಕ್ಯ ಅರಸನನ್ನು ಪಟ್ಟದಿಂದ ತಳ್ಳಿ ತಾನು ಸಿಂಹಾಸನವನ್ನು ಆಕ್ರಮಿಸಿಕೊಂಡನು ಚಾಳುಕ್ಯ ಮನೆತನದ ಕೊನೆಯ ಅರಸನಾದ ಸೋಮೇಶ್ವರನು ರಾಜನಿಷ್ಠನಾದ ಬರ್ಮನೆಂಬೊಬ್ಬ ಶೂರ ದಳವಾಯಿಯ ನೆರವಿನಿಂದ ದಕ್ಷಿಣದಲ್ಲಿ ಅಣ್ಣಿಗೇರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಚಾಳುಕ್ಯ ಸಿಂಹಾಸನವನ್ನೇರಿದನು ಕಲ್ಯಾಣದಲ್ಲಿ ಬಿಜ್ಜಳನು ಅರಸನಾಗಿ ಆಳುವಾಗ ವೀರಶೈವ ಧರ್ಮವು ಪ್ರಬಲವಾಯಿತು ಬಸವೇಶ್ವರನು ವೀರಶೈವಧರ್ಮವನ್ನು ಪ್ರಚಾರಗೊಳಿಸಿದನು ಬಿಜ್ಜಳನು ಬಸವೇಶ್ವರನ ಅನುಯಾಯಿಗಳಿಂದ ಈ ಧರ್ಮಕ್ರಾಂತಿಯಲ್ಲಿ ಕೊಲ್ಲಲ್ಪಟ್ಟನು. ರಾಜಧಾನಿಯಾದ ಕಲ್ಯಾಣದಲ್ಲಿ ಭಯಂಕರವಾದ ಕೊಲೆ ಸುಲಿಗೆಗಳು ನಡೆದವು ಬಿಜ್ಜಳನ ಮಗನಾದ ರಾಯಮುರಾರಿಸೋವಿ ಎಂಬವನು ಪಟ್ಟವೇರಿ ತಂದೆಯ ವಧೆಯ ಸೇಡು ತೀರಿಸಿಕೊಳ್ಳುವುದಕ್ಕೆ ಉದ್ಯುಕ್ತನಾದ

ದ್ದನು ಹೀಗೆ, ವೀರಬಲ್ಲಾಳನು ೧೧೭೩ರಲ್ಲಿ ಹೊಯ್ಸಳ ರಾಜ್ಯಕ್ಕೆ ಅಧಿಪತಿಯಾದ ಕಾಲದಲ್ಲಿ ಕಲ್ಯಾಣದಲ್ಲಿ ಭಯಂಕರವಾದ ಕ್ರಾಂತಿಗಳು ನಡೆದಿದ್ದುವು ಇತ್ತ, ಅಣ್ಣಿಗೇರಿಯಲ್ಲಿ, ಸೋಮೇಶ್ವರನು ಮರಣೋನ್ಮುಖವಾದ ಚಾಳುಕ್ಯ ವಂಶವನ್ನು ಬರ್ಮನೇ ಮುಂತಾದ ಹಲವು ರಾಜನಿಷ್ಠ ದಂಡನಾಯಕರ ನೆರವಿನಿಂದ ಉಳಿಸಿಕೊಳ್ಳಲು ಯತ್ನಿಸುತ್ತಿದ್ದನು ಆದರೆ, ಕಲ್ಯಾಣದಲ್ಲಿ ಕಲಚುರಿಯ ಮನೆತನವೂ ಬಹಳ ದಿವಸ ಬಾಳಲಿಲ್ಲ, ಸೋಮೇಶ್ವರನ ಪ್ರಯತ್ನವೂ ಸಫಲವಾಗಲಿಲ್ಲ ಹೀಗಾಗಿ, ವೀರಬಲ್ಲಾಳನ ಆಳಿಕೆಯಲ್ಲಿ, ಎರಡು ಸಾಮ್ರಾಜ್ಯಗಳು ಬಹುಶಃ ಏಕಕಾಲಕ್ಕೆ ಪಾತಾಳವನ್ನು ಕಂಡವು ಬರ್ಮನೇನೋ ತನ್ನ ಅತುಲಸಾಹಸದಿಂದ ಕಲಚುರಿ ರಾಜ್ಯವನ್ನು ಕೊನಗಾಣಿಸಿದನು ಆದರೆ, ದುರ್ಬಲವಾದ ಚಾಳುಕ್ಯ ಸಿಂಹಾಸನವನ್ನು ದೃಢಪಡಿಸುವ ಕಾರ್ಯವು ಮಾತ್ರ ಆತನಿಂದ ಕೈಗೂಡಲಿಲ್ಲ ಕೊನೆಗೆ ಆತನು ವೀರಬಲ್ಲಾಳನಿಂದ ಸೋಲಿಸಲ್ಪಟ್ಟನು ಈ ರೀತಿಯಾಗಿ, ಪುರಾತನ ಕಾಲದಿಂದ ಪ್ರಸಿದ್ಧವಾಗಿದ್ದ ಕರ್ನಾಟಕದ ಎಲ್ಲಕ್ಕೂ ಶ್ರೇಷ್ಠವಾದ ಚಾಳುಕ್ಯ ಮನೆತನವು ೧೨ನಯ ಶತಮಾನದ ಕೊನೆಗೆ ಹೇಳ ಹಸರಿಲ್ಲದ ಮುಳುಗಿಹೋಯಿತು ಅದರೊಡನ, ಕರ್ನಾಟಕ ಸಾಮ್ರಾಜ್ಯದ ಅಖಂಡತ್ವವೂ ಅಳಿದುಹೋಯಿತು ೬ನೆಯ ಶತಮಾನದಿಂದ ೧೨ನಯ ಶತಮಾನದ ಕೊನೆಯವರಗೆ ಈ ಅಖಂಡತ್ವಕ್ಕೆ ಭಂಗವುಂಟಾಗಿರಲಿಲ್ಲ ಈ ಅಖಂಡತ್ವವನ್ನು ಉಂಟುಮಾಡಿದವರು ಚಾಳುಕ್ಯರು, ಕಳೆದುಕೊಂಡವರು ಚಾಳುಕ್ಯರು ನಡುವೆ, ಎರಡು ನೂರು ವರ್ಷ, ರಾಷ್ಟ್ರಕೂಟರು ರಾಜ್ಯವಾಳಿದರೂ ಈ ಅಖಂಡತ್ವಕ್ಕೆ ಬಾಧೆಯುಂಟಾಗಿರಲಿಲ್ಲ, ಅಲ್ಲದೆ, ರಾಷ್ಟ್ರಕೂಟರೂ ಕನ್ನಡಿಗರೇ ಆಗಿದ್ದುದರಿಂದ ಕರ್ನಾಟಕದ ದೃಷ್ಟಿಯಿಂದ ಏನೂ ಹಾನಿಯುಂಟಾಗಲಿಲ್ಲ ಮುಂದೆ, ಈ ಅಖಂಡವಾದ ಕರ್ನಾಟಕ ಸಾಮ್ರಾಜ್ಯದಲ್ಲಿ, ಎರಡು ದೊಡ್ಡ ತುಂಡುಗಳಾದವು. ಉತ್ತರದ ತುಂಡು ದೇವಗಿರಿ ಯಾದವರ ವಶಕ್ಕೆ ಹೋಯಿತು ; ದಕ್ಷಿಣದ ತುಂಡು ಹೊಯ್ಸಳರ ವಶಕ್ಕೆ ಹೋಯಿತು ಕನ್ನಡಿಗರಾದ ದೇವಗಿರಿ ಯಾದವರ ಕಾಲದಲ್ಲಿ, ಮರಾಟಿಗರು ತಲೆಯೆತ್ತಲಾರಂಭಿಸಿದರು. ಮತ್ತು ಬರಬರುತ್ತ, ಯಾದವ ರಾಜ್ಯದಲ್ಲಿ ಪ್ರಬಲರಾಗಹತ್ತಿದರು. ದಕ್ಷಿಣದಲ್ಲಿ

ಹೊಯ್ಸಳರು ಮಾತ್ರ ತಮ್ಮ ಕರ್ನಾಟಕತ್ವವನ್ನು ಅಚ್ಚಳಿಯದೆ ಇಟ್ಟು ಕೊಂಡು ಕರ್ನಾಟಕದ ಕೀರ್ತಿಯನ್ನು ವಿಶೇಷವಾಗಿ ಹಬ್ಬಿಸಿದರು ಇರಲಿ

ಚಾಳುಕ್ಯ ಮತ್ತು ಕಲಚೂರಿ ಇವೆರಡೂ ಮನೆತನಗಳು ಮುಳುಗಿ ದೂಡನೆ, ದೇವಗಿರಿಯಲ್ಲಿ ಭಿಲ್ಲಮನೆಂಬ ಶೂರಯಾದವಅರಸನು ಚಾಳುಕ್ಯ ರಾಜ್ಯದ ಉತ್ತರ ಭಾಗವನ್ನು ತೆಗೆದುಕೊಂಡನು ದಕ್ಷಿಣ ದಲ್ಲಿ, ಕಾಲುಚಾಚುವುದಕ್ಕೆ ಪ್ರಯತ್ನಿಸಿದನು ಆದರೆ, ಆ ಕಡೆಯಲ್ಲಿ, ವೀರಬಲ್ಲಾಳನಂತಹ ಭೀಮಪರಾಕ್ರಮಿಯಾದ ಅರಸನು ರಾಜ್ಯವಾಳುತ್ತಿ ದ್ದುದರಿಂದ ಭಿಲ್ಲಮನ ಬಯಕೆಯು ಪೂರ್ಣವಾಗಲಿಲ್ಲ ವೀರಬಲ್ಲಾ ಳನು ಉತ್ತುಂಗ ಪರಾಕ್ರಮನು ಆತನು ತನ್ನ ತಂದೆಯ ಕಾಲದಲ್ಲಿಯೇ ಆತನೊಡನೆ ಪಶ್ಚಿಮ ಘಟ್ಟದಲ್ಲಿ ಅನೇಕ ಕೋಟೆಗಳನ್ನು ತೆಗೆದುಕೊಂಡು ರಣವಿಕ್ರಮನೆಂದು ಖ್ಯಾತಿಗೊಂಡಿದ್ದನು ಆಗ, ತಂತ್ರಪಾಲ ಪೇರ್ಮಾಡಿ ಎಂಬ ಮಂತ್ರಿಯು ಕೊಂಗಾಳ್ವರನ್ನೂ ಚೆಂಗಾಳ್ವರನ್ನೂ ಅನ್ಯಮಲೆಪ ರನ್ನೂ ಗೆದ್ದು, ವೀರಬಲ್ಲಾಳನಿಗೆ ಅವರು ಶರಣು ಬರುವಂತೆ ಮಾಡಿ ದನು ಕೊನೆಗೆ, ವೀರಬಲ್ಲಾಳನಿಗೆ ತಂದೆಯ ಸಿಂಹಾಸನವನ್ನು ಸುರ ಕ್ಷಿತವಾಗಿ ದೊರಕಿಸಿ ಕೊಟ್ಟವನೂ ಇವನೇ ತಂತ್ರಪಾಲ ಪೇರ್ಮಾ ಡಿಯು ವೀರಬಲ್ಲಾಳನಿಗೆ ಪ್ರಧಾನಿಯಾದನು ಮುಂದೆ, ಪಶ್ಚಿಮ ಘಟ್ಟ ದಲ್ಲಿರುವ ಅನೇಕ ಮಲೆಪರು ವೀರಬಲ್ಲಾಳನಿಗೆ ವಿರುದ್ಧವಾಗಿ ನಿಂತರು. ಆಗ, ವೀರಬಲ್ಲಾಳನು ಬಟ್ಟರಸನೆಂಬ ದಂಡನಾಯಕನನ್ನು ಆ ಪ್ರದೇ ಶಕ್ಕೆ ಕಳುಹಿಸಿದನು ಬಟ್ಟರಸನು ಚೆಂಗಾಳ್ವ ಅರಸನಾದ ಮಹಾದೇವ ನನ್ನು ಕೊಡಗು ಪ್ರಾಂತದಲ್ಲಿ ಮುತ್ತಿದನು ಮಹಾದೇವನು ಹತನಾ ದನು ಆದರೆ, ಪೆಮ್ಮ-ವೀರಪ್ಪನೆಂಬವನು ಬಟ್ಟರಸನ ಮೇಲೆ ದಂಡೆತ್ತಿ ಬಂದನು ಆತನನ್ನೂ ಬಟ್ಟರಸನು ಸೋಲಿಸಿ ಓಡಿಸಿದನು ಈ ರೀತಿ ಯಾಗಿ, ವೀರಬಲ್ಲಾಳನ ರಾಜ್ಯವು ದಕ್ಷಿಣದಲ್ಲಿ ಆತನ ದಳವಾಯಿಗಳಿಂದ ವಿಸ್ತಾರ ಹೊಂದುತ್ತಿರಲು ಉತ್ತರದಲ್ಲಿ ಸ್ವತಃ ವೀರಬಲ್ಲಾಳನೇ ತನ್ನ ಅತುಲಪರಾಕ್ರಮದಿಂದ ಅನೇಕ ಅರಸರನ್ನು ಸೋಲಿಸಿ ಪ್ರಖ್ಯಾತನಾದನು.

[೧೧]

ಪಾಂಡ್ಯರ ವಶದಲ್ಲಿದ್ದ ಉಚ್ಚಂಗಿದುರ್ಗದ ಕೋಟೆಯು ಬಹಳ ಅಭೇದ್ಯ ವಾದ ಭದ್ರ ಕೋಟೆಯು ಚೋಳರು ಅದನ್ನು ಹನ್ನೆರಡು ವರ್ಷ ಮುತ್ತಿದ್ದರು. ಆದರೂ ಅದನ್ನು ವಶಪಡಿಸಿಕೊಳ್ಳುವುದು ಅವರಿಂದ ಆಗಿದ್ದಿಲ್ಲ ಇಂಥ ದುರ್ಗಮವಾದ ಕೋಟೆಯನ್ನು ವೀರಬಲ್ಲಾಳನು ಲೀಲೆಯಿಂದ ವಶಪಡಿಸಿಕೊಂಡನು ಅದರ ಅರಸನಾದ ಕಾಮದೇವನು ವೀರಬಲ್ಲಾಳನಿಗೆ ಶರಣುಬಂದ ಕಾರಣ, ವೀರಬಲ್ಲಾಳನು ಉದಾರ ಮನಸ್ಸಿನಿಂದ ಆತನ ರಾಜ್ಯವನ್ನು ಆತನಿಗೆ ಮರಳಿ ಕೊಟ್ಟನು ಉಚ್ಚಂಗಿದುರ್ಗದಂಥ ಬಿಕ್ಕಟ್ಟಾದ ಗಿರಿದುರ್ಗವನ್ನು ಈ ಮಲ್ಲನು ಸಹಜವಾಗಿ ಹಿಡಿದುಕೊಂಡ ದುದರಿಂದ ವೀರಬಲ್ಲಾಳನಿಗೆ ಗಿರಿದುರ್ಗಮಲ್ಲನೆಂಬ ಬಿರುದು ಪ್ರಾಪ್ತ ವಾಯಿತು ಬಹುಶಃ ಆ ದುರ್ಗವನ್ನು ಆತನು ಶನಿವಾರದ ದಿವಸ ತಗೆದು ಕೊಂಡಂತೆ ತೋರುತ್ತದೆ ಏಕೆಂದರೆ, ಆದೇ ಕಾಲಕ್ಕೆ ಆತನಿಗೆ ' ಶನಿವಾರ ಸಿದ್ಧಿ ' ಎಂಬ ಬಿರುದುಂಟಾಗಿದೆ

ವೀರಬಲ್ಲಾಳನ ಎಲ್ಲಕ್ಕೂ ದೊಡ್ಡ ವಿಜಯವೆಂದರೆ ಸೊರಟೂರಿನಲ್ಲಾದ ಕಾಳಗದಲ್ಲಿ, ಆತನು ಯಾದವ ಅರಸನಾದ ಭಿಲ್ಲಮನ ಮೇಲೆ ಎರಗಿ ಸಂಪಾದಿಸಿದುದು ಭಿಲ್ಲಮನು ಅತ್ಯಂತ ಶೂರನಾದ ಅರಸನು ಆತನು ಉತ್ತರದೇಶವನ್ನೆಲ್ಲ ಕೈವಶಪಡಿಸಿಕೊಂಡು ಅಶನಿಸನ್ನಾಹದಿಂ ದೊಡಗೊಂಡ ಎರಡು ಲಕ್ಷ ಸುಕ್ಷೋಣಿಯರು (ಕಾಲಾಳು) ಮುತ್ತು ಮೇಲಂಕವಣಿಯ ಪರ್ಯಾಣದಿಂದ ತೋರ್ಕವೆತ್ತ ಹನ್ನೆರಡು ಸಾವಿರ ರಾವುತರು ಇಷ್ಟು ದೊಡ್ಡ ಸೈನ್ಯದೊಂದಿಗೆ ಭಿಲ್ಲಮನು ಶಿರಹಟ್ಟಿಯ ಸಮೀಪದಲ್ಲಿರುವ ಸೊರಟೂರಿಗೆ ಬಂದು ವೀರಬಲ್ಲಾಳನನ್ನು ಇದಿರಾದನು ಆ ಭಯಂಕರವಾದ ಬವರದಲ್ಲಿ, ಬಲ್ಲಾಳಭೂಪಾಲಕನು ತನ್ನೊಂದಾನೆಯಿಂದ ಸೇವುಣ ನೃಪಬಲವನ್ನು ನೂಂಕಿ, ಸೊರಟೂರಿನಿಂದ ಕೃಷ್ಣವೇಣೀನದಿಯ ತಡಿಯವರೆಗೆ ಅದನ್ನು ಓಡಿಸಿಬಿಟ್ಟನು ಆ ದಾರಿಯುದ್ದಕ್ಕೂ ಹೆಣಗಳ ರಾಶಿಯು ಬಿದ್ದಿತ್ತು ಮಾರಿಗೆ ಅನ್ನವಾಯಿತು ಮುಂದೆ ತನಗೆ ಎಂದಿಗೆ ಹಸಿವೆಯಾಗುವುದೋ ಏನೋ ಎಂದನ್ನುವಷ್ಟು ಅವಳ ಹಸಿವೆ ಹಿಂಗಿತು, ದಾರಿ ಬಟ್ಟೆಯೆಲ್ಲವೂ ಶತ್ರುಗಳ ರಕ್ತದಿಂದ ಕೆಸರಾಯಿತು ಅದು ಎಂದಿಗೆ ಆರುವುದೋ ಎಂದು ಜನರು ಹಾದಿ ನೋಡುತ್ತಿದ್ದರು ಇಷ್ಟು ಘೋರವಾದ

ಸಂಗ್ರಾಮವೆಸಗಿ, ವೀರಬಲ್ಲಾಳನಿಗೆ ಪೂರ್ಣಜಯವು ದೊರಕಿತು (೧೧೯೦) ಆಬಳಿಕ ಈ ಗಿರಿದುರ್ಗಮಲ್ಲನು ವಿರಾಟಕೋಟೆ, ಕುರುಗೋಡು, ಮಾತಂಗ ಪರ್ವತ, ಗುತ್ತಿ, ಬಳ್ಳಿಟ್ಟಿಗ, ರಟ್ಟಿವಳ್ಳಿ ಮುಂತಾದ ಅನೇಕ ಕೋಟೆಗಳನ್ನು ಕೈವಶಮಾಡಿಕೊಂಡು ತನ್ನ ರಾಜ್ಯವನ್ನು ಕೃಷ್ಣಾಮಲಪ್ರಭಾನದಿಗಳವರೆಗೆ ಬೆಳಿಸಿದನು ಆಗ ವೀರಬಲ್ಲಾಳನು ೧೧೯೧ನೆಯ ಇಸ್ವಿಯ ಸುಮಾರಕ್ಕೆ ಗದಗ ತಾಲೂಕಿನಲ್ಲಿರುವ ಲಕ್ಕುಂಡಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು ಆಗಮಾತ್ರ ವೀರಬಲ್ಲಾಳನು ಸ್ವತಂತ್ರವಾಗಿ ಚಕ್ರವರ್ತಿ ಎಂಬ ಬಿರುದನ್ನು ಧಾರಣಮಾಡಿದನು ಮುಂದ ಆತನು ಯಲಬುರ್ಗೆ, ಮಾನವಿ, ಬಳ್ಳಾರಿ ಮುಂತಾದ ಪ್ರದೇಶಗಳನ್ನು ತೆಗೆದುಕೊಂಡನು ಆಗ ಆತನ ರಾಜ್ಯವು ಉತ್ತರದಲ್ಲಿ ಭೀಮರಥೀ ನದಿಯವರೆಗೂ ಪೂರ್ವದಲ್ಲಿ ಬಳ್ಳಾರಿ ಜಿಲ್ಲೆಯ ಕೊನೆಯವರೆಗೂ ಹಬ್ಬಿತು ಸಾರಾಂಶ, ಮೊದಲು ಮಲಪ್ರಭೆಯೂ ಅದು ಕೃಷ್ಣೆಗೆ ಕೂಡಿದ ಬಳಿಕ ಕೃಷ್ಣಾನದಿಯೂ ದೇವಗಿರಿ ಯಾದವ ರಾಜ್ಯದ ಮತ್ತು ಹೊಯ್ಸಳ ಯಾದವರ ರಾಜ್ಯದ ನಡುವಿನ ಗೆರೆಯಾಗಿತ್ತು ವೀರಬಲ್ಲಾಳನು ಚಕ್ರವರ್ತಿಯಾಗಿ, ಶ್ರೀಪೃಥ್ವೀವಲ್ಲಭ, ಮಹಾರಾಜಾಧಿರಾಜ, ಪರಮೇಶ್ವರ, ಪರಮಭಟ್ಟಾರಕ ಮುಂತಾದ ಬಿರುದುಗಳನ್ನು ಧರಿಸಿ ತನ್ನ ಶಕವನ್ನು ಕೂಡ ಪ್ರಾರಂಭಮಾಡಿದನು ವಿಜಾಪುರ, ರಾಣೆಬೆನ್ನೂರ ತಾಲೂಕಿನಲ್ಲಿರುವ ಹುಲ್ಲೂರು ಇವು ಆತನ ಉಪರಾಜಧಾನಿಗಳಾಗಿದ್ದುವು

ಈ ಬಗೆಯಾಗಿ, ವೀರಬಲ್ಲಾಳನು ಸುಮಾರು ೪೨ ವರ್ಷ ಅತ್ಯಂತ ವೈಭವದಿಂದ ರಾಜ್ಯವಾಳಿದನು ಈ ಬಲ್ಲಾಳನೃಪಾಳಕನು ನಿಜಭುಜಬಲಪ್ರೌಢಪ್ರತಾಪವೆಂಬ ತನ್ನ ಖಡ್ಗಕ್ಕೆ ತನ್ನ ರಿಪುವಾದ ಪಾಂಡ್ಯ ನೃಪಾಳನ ರಕ್ತದಲ್ಲಿ, ಸುಪ್ರಂಬಂತೆ ನೀರುಣಿಸಿದನು, ಭಿಲ್ಲಮನ ಮಸ್ತಕವೆಂಬ ಮಸೆಗಲ್ಲಿನಲ್ಲಿ ಘೋರಂಬಂತೆ ಮಸೆದನು ಮತ್ತು ಭಿಲ್ಲಮನ ಮಗನಾದ ಜೈತುಗಿಯ ವದನವೆಂಬ ಒರೆಯಲ್ಲಿ ಘಣ್ಣಿಂದು ಇಟ್ಟನು ಇಂತಹ ಪ್ರಬಲಪ್ರತಾಪಶಾಲಿಯಾದ ವೀರಬಲ್ಲಾಳನು ಕನ್ನಡಿಗರಲ್ಲೆಲ್ಲ ಸದಾ ವೀರಸ್ಫೂರ್ತಿಯನ್ನು ಹುಟ್ಟಿಸದ ಇರನು!

ಪರಮಾವಧಿಸ್ವಾಮಿಭಕ್ತನಾದ

# ವೀರಕುವರ ಲಕ್ಷ್ಮ

---

## (ಸುಮಾರು ೧೧೯೦-೧೨೨೦)

ಜಗತ್ತಿನೊಳಗಿನ ಜನರಲ್ಲಿ ಸ್ಥೂಲವಾಗಿ ಎರಡು ವಿಭಾಗಗಳನ್ನು ಮಾಡಬಹುದು. (೧) ಸಾಮಾನ್ಯ ಜನರು. (೨) ವಿಶೇಷ ಜನರು. ಸಾಮಾನ್ಯಜನರ ಜೀವಿತದ ಇಂಗಿತವನ್ನು ತಿಳಿವುದಕ್ಕೆ ಸಾಮಾನ್ಯ ಬುದ್ಧಿ ಸಾಕು. ವಿಶೇಷ ಜನರ ಜೀವಿತದ ರಹಸ್ಯವು ಮಾತ್ರ ಸಾಮಾನ್ಯ ಬುದ್ಧಿಗೆ ತಟ್ಟನೆ ಹೊಳೆವುದಿಲ್ಲ. ಪ್ರಪಂಚದೊಳಗಿನ ಸರ್ವಸಾಧಾರಣ ವಾದ ಸಂಗತಿಗಳನ್ನು ಸರ್ವಸಾಧಾರಣವಾದ ರೀತಿಯಲ್ಲಿ ಉಪಯೋಗಿಸು ಕೊಳ್ಳುವುದೇ ವ್ಯವಹಾರಜ್ಞರೆಂದೆನ್ನಿಸಿಕೊಳ್ಳುವ ಸಾಮಾನ್ಯಜನರ ಪದ್ಧ ತಿ. ಅವರಿಗೆ ಸಂಸಾರಪ್ರವಾಹದಲ್ಲಿ ಧುಮುಕಿ ಆಳವಾದ ನೀರಿನಲ್ಲಿ ಈಸಲಿಕ್ಕೆಬೇಡ. ದಂಡೆಯ ಮೇಲೆ ಕುಳಿತುಕೊಂಡು, ತಂಬಿಗೆಯಲ್ಲಿ ನೀರನ್ನು ತುಂಬಿಕೊಂಡು ಸ್ನಾನಮಾಡುವುದಷ್ಟೆ ಅವರ ಕೆಲಸ. ಆದು ದರಿಂದ, ಆಳವಾದ ಪ್ರವಾಹದಲ್ಲಿ ಈಸುವುದರಿಂದಾಗುವ ಆನಂದವೂ ಅವರಿಗಿಲ್ಲ. ಅದರಲ್ಲುಂಟಾಗಬಹುದಾದ ಅಪಘಾತಗಳಿಂದಲೂ ಅವರು ಮುಕ್ತರಿರುತ್ತಾರೆ. ಇದಕ್ಕೆವಿರುದ್ಧವಾಗಿ ವಿಶೇಷ ಜನರು ಎಂದರೆ ವಿಭೂತಿ ಗಳು ತಮ್ಮಜೀವಿತದಲ್ಲಿ ಉನ್ನತವಾದ ಗುರಿಯನ್ನಿಟ್ಟುಕೊಂಡು, ಅದನ್ನು ಸಾಧಿಸುವುದಕ್ಕೆ ಅನೇಕ ಸಂಕಟಗಳನ್ನು ಆನಂದದಿಂದ ಸಹನ ಮಾಡು ತ್ತಾರೆ. ಬುದ್ಧ, ಕ್ರಾಯಿಸ್ಟ, ಮಹಮ್ಮದ ಮುಂತಾದ ಮಹನೀಯರ ಚರಿತ್ರೆಗಳನ್ನೋದಿದರೆ, ಅವರ ಆಯುಷ್ಯದ ಧ್ಯೇಯವು ಎಷ್ಟು ಉದಾತ್ತ ವಾಗಿತ್ತೆಂಬುದು ಗೊತ್ತಾಗುವುದು. ಆ ವಿಭೂತಿಗಳ ಜೀವನದ ಇಂಗಿ

ತವು ತಿಳಿಯಬೇಕಾದರೆ, ನಾವು ಅವರ ಧ್ಯೇಯದ ಮರ್ಮವನ್ನರಿಯ ಬೇಕು ಇಂತಹ ವಿಭೂತಿಗಳ ವಿಚಾರಗಳ ಸೋಂಕು ಆಗಿನ ಕಾಲದ ಮಿಕ್ಕ ಜನರಿಗೂ ತಗಲಿ, ಎಲ್ಲರಲ್ಲಿಯೂ ಒಂದು ವಿಲಕ್ಷಣವಾದ ತೇಜವು ಸ್ಫುರಿಸುತ್ತಿರುತ್ತದೆ ಮೋಕ್ಷಕ್ಕೋಸ್ಕರ ಪ್ರಾಪಂಚಿಕ ಸುಖದ ಮೇಲೆ ನೀರುಬಿಟ್ಟು ಸನ್ಯಾಸವೃತ್ತಿಯನ್ನು ಸ್ವೀಕರಿಸುವ-ಸಂಸಾರದೊಳಗಿನ ದುಃಖವನ್ನು ಕಂಡು ಮರಮರನೆ ಮರುಗಿ ಅದರ ನಿವಾರಣಾರ್ಥವಾಗಿ ಅರಸೊತ್ತಿಗೆಯನ್ನು ಬದಿಗೊತ್ತಿ ಅರಣ್ಯವಾಸವನ್ನು ಕೈಕೊಳುವ-ಸತ್ಯಕ್ಕೋಸ್ಕರ ಸಿಲುಬೆಯನ್ನೇರಲಿಕ್ಕೆ ಸಿದ್ಧವಾದ-ಪಾತಿವ್ರತ್ಯಕ್ಕೋಸ್ಕರ ಪ್ರಾಣವನ್ನು ಅರ್ಪಿಸಲಿಕ್ಕೆ ಉತ್ಸುಕವಾದ-ದೇಶಸೇವೆಗೋಸ್ಕರ ಯುದ್ಧದಲ್ಲಿ ಮೃತ್ಯುವನ್ನು ಅಪ್ಪಿಕೊಳ್ಳಲು ಸಜ್ಜವಾದ-ಸ್ವಾಮಿಭಕ್ತಿಗೋಸ್ಕರ ಅಸುವನ್ನು ನೀಗಲು ಉದ್ಯುಕ್ತವಾದ-ಜೀವನಗಳ ಗುಟ್ಟನ್ನು ಕಂಡು ಹಿಡಿಯುವುದು ಸಾಮಾನ್ಯ ಕೆಲಸವಲ್ಲ ಸನ್ಮಾರ್ಗದೊಳಗಿನ ಅತಿಯಲ್ಲಿರುವ ರಸವು 'ಮಿತಿ'ಯಲ್ಲಿ ಇಲ್ಲ ಭಕ್ತನು ಮೈಮರೆತಷ್ಟು ಆತನ ಯೋಗ್ಯತೆ ಹೆಚ್ಚು, ಶೂರನ ದೃಷ್ಟಿಯು ಧ್ಯೇಯದಲ್ಲಿ ಅಷ್ಟು ಬಲವಾಗಿ ನಟ್ಟಿರುವುದರಿಂದಲೇ, ಕೂರಂಬುಗಳು ನಟ್ಟ ದುಃಖವು ವೀರನಿಗೆ ಆಗುವುದಿಲ್ಲ ಒಟ್ಟಿಗೆ, ವಿಭೂತಿಗಳ ಜೀವನದ ಮರ್ಮವನ್ನರಿತುಕೊಳ್ಳುವುದಕ್ಕೆ ನಾವು ಆ ಬಗೆಯ ಉಚ್ಚವಾದ ವಾತಾವರಣದಲ್ಲಿ ಹೋಗಿ, ಅವರ ಧ್ಯೇಯದ ದೃಷ್ಟಿಯಿಂದ ಅವರ ಕೃತ್ಯಗಳನ್ನು ವಿಮರ್ಶಿಸಬೇಕು

ಧರ್ಮವೇ ಜೀವನದ ಸರ್ವಸ್ವವೆಂದು ಬಗೆದವನ ಕೃತ್ಯಗಳು ಸಾಮಾನ್ಯರಿಗೆ ಹುಚ್ಚನ ಕೃತ್ಯಗಳಂತೆ ತೋರುವವು, ಪಾತಿವ್ರತ್ಯಕ್ಕೋಸ್ಕರ ಗಂಡಂದಿರೊಡನೆ ಸಹಗಮನ ಮಾಡುವ ಹೆಂಗಸರು, ಆ ತೀಕ್ಷ್ಣ ಕಲ್ಪನೆಯು ಲುಪ್ತವಾದ ಈಗಿನ ಕಾಲದಲ್ಲಿ ಹುಚ್ಚರಾಗಿ ತೋರಬಹುದು ರಜಪೂತ ಮತ್ತು ಕರ್ನಾಟಕ ಸ್ತ್ರೀಯರು ಪಾತಿವ್ರತ್ಯಕ್ಕೋಸ್ಕರ ಜೋಹಾರ ಮಾಡುವುದರ ಮಹತ್ವವು ಈಗ ನಮಗೆ ಹೇಗೆ ನಿಚ್ಚಳವಾಗಿ ತಿಳಿದೀತು? ಈ ಇಪ್ಪತ್ತನೆಯ ಶತಮಾನದಲ್ಲಿ ಕೂಡ, ಸ್ವಾಮಿಭಕ್ತಿಗೋಸ್ಕರ ಆತ್ಮಹತ್ಯೆಯನ್ನು ಮಾಡಿಕೊಂಡ ಉದಾಹರಣೆಗಳು ದೊರೆಯುತ್ತವೆ

ಮಾರ್ಕ್ವಿಸ ಇಟೋ ಎಂಬ ಜಪಾನ ದೇಶದ ಮುಂತ್ರಿಯು ಮೊನ್ನೆ ಮೊನ್ನೆ ಜಪಾನ ದೇಶದ ಅರಸನು ಸತ್ತಕೂಡಲೆ ಸ್ವಾಮಿಭಕ್ತಿಯ ಮೂಲಕ ತಾನೂ ಪ್ರಾಣವನ್ನು ತೊಲಗಿದನು ಒಟ್ಟಿಗೆ, ವಿಶೇಷ ಜೀವನಗಳ ರಹಸ್ಯವು ತಿಳಿಯಬೇಕಾದರೆ, ಆಗಿನ ಕಾಲದ ಕಲ್ಪನಗಳನ್ನು ನಾವು ಮುಂಚೆ ಮನಸ್ಸಿನಲ್ಲಿ ತರಬೇಕು

ಇಷ್ಟು ಉದ್ದವಾದ ಪ್ರಸ್ತಾವನಯನ್ನು ಮಾಡುವುದಕ್ಕೆ ಕಾರಣ ವೇನೆಂದರ ಕಡುತರವಾದ ಸ್ವಾಮಿಭಕ್ತಿಯಿಂದ, ತಮ್ಮ ಪ್ರಾಣಗಳನ್ನು ಆನಂದದಿಂದ ತಾವಾಗಿಯೇ ತೂಲಗಿದ ಕುವರ ಲಕ್ಷ್ಮನ ಮತ್ತು ಆತನ ಹೆಂಡತಿಯ ಮತ್ತು ಆತನ ಸಾವಿರ ಭಟರ ಚರಿತೆಯು ಇದೇ ಬಗಯಾಗಿ ಅಸದೃಶವಾದುದಿರುತ್ತದ ಕರ್ನಾಟಕದಲ್ಲಿ ಒಂದು ಕಾಲಕ್ಕೆ ಸ್ವಾಮಿಭಕ್ತಿಗಾಗಿಯಾಗಲಿ ಮತ್ತಾವುದೊಂದು ವಿಶೇಷವಾದ ಉದ್ದೇಶ ಸಾಧನಗೋಸ್ಕರವಾಗಿಯಾಗಲಿ, ಜನರು ಸಂತೋಷದಿಂದ ಆತ್ಮಹತ್ಯವನ್ನು ಮಾಡಿಕೂಳ್ಳುವ ಈಗಿನ ಕಾಲದಲ್ಲಿ ವಿಲಕ್ಷಣವಾಗಿ ತೋರುವ-ಪದ್ಧತಿಯು ರೂಢವಾಗಿದ್ದಂತ ತೋರುತ್ತದೆ ಸ್ವಾಮಿಭಕ್ತಿಗಾಗಿ ತಮ್ಮ ಒಡೆಯನ ಸಮಾಧಿಯ ಕೆಳಗೆ ತಾವೂ ಜೀವವಂತವಾಗಿ ಹುಗಿಸಿಕೊಂಡ ಉದಾಹರಣೆಗಳೂ ಬಂಕೆಯಲ್ಲಿ ಹಾರಿ ಪ್ರಾಣ ಕೊಟ್ಟ ಉದಾಹರಣಗಳೂ ಅರಸನಿಗೆ ಮಕ್ಕಳಾಗುವುದಕ್ಕೋಸ್ಕರ ತಮ್ಮ ಜೀವವನ್ನು ದೇವತೆಗೆ ಬಲಿಗೊಟ್ಟ ಉದಾಹರಣೆಗಳೂ, ಗೋಪುರವು ಗಟ್ಟಿಯಾಗಿ ನಿಲ್ಲದಿದ್ದರೆ, ತಮ್ಮನ್ನು ಗೋಪುರದ ತಳದಲ್ಲಿ ಸಜೀವವಾಗಿ ಹುಗಿಸಿಕೊಂಡ ಉದಾಹರಣೆಗಳೂ ಕರ್ನಾಟಕದ ಇತಿಹಾಸದಲ್ಲಿ ದೂರಯುತ್ತವೆ ಅರ್ಥಾತ್, ಇಂತಹ ಅತಿರೇಕವಾದ ಸಂಗತಿಗಳು ಯಾವ ಕಾಲದಲ್ಲಿಯೇ ಆಗಲಿ, ಹೇರಳವಾಗಿ ಇರುವುದು ಶಕ್ಯವಿಲ್ಲ ಆದರೆ, ಅವು ಸ್ವಲ್ಪೇ ಇದ್ದರೂ, ಆ ಕಾಲದಲ್ಲಿ ತಮಗೆ ಸರಿಯೆಂದು ತೋರಿದ ಕಲ್ಪನಗಳಿಗೋಸ್ಕರ ಜನರು ಎಷ್ಟುಮಟ್ಟಿಗೆ ಸ್ವಾರ್ಥತ್ಯಾಗ ಮಾಡಲು ಸಿದ್ಧರೆಂಬುದು ಮಾತ್ರ ಇದರಿಂದ ಚೆನ್ನಾಗಿ ವ್ಯಕ್ತವಾಗುತ್ತದ ಈ ತರಹದ ಜನರು ಹುಟ್ಟುವುದೇ ದೇಶದ ಅಭ್ಯುದಯದ ಚಿಹ್ನವು ಜೈನಧರ್ಮದಲ್ಲಿ ಸಲ್ಲೇಖನ ವಿಧಿಯಿಂದ ಎಂದರೆ ನಿರಶನ ವ್ರತವನ್ನು ಕೈಕೊಂಡು ಸಾಯುವುದು ಸಾಮಾನ್ಯ ಸಂಗತಿಯಾಗಿತ್ತು ಕರ್ನಾಟಕದಲ್ಲಿ, ಆತ್ಮಹತ್ಯೆಯನ್ನು ಮಾಡಿ

ಕೊಳ್ಳುವ ರೂಢಿಯೂ ಜೈನಧರ್ಮದ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಪರಿಣಾಮವಿದ್ದರೂ ಇರಬಹುದು

ಕರ್ನಾಟಕದಲ್ಲಿ, ಹಿಂದಿನ ಕಾಲಕ್ಕೆ 'ಗರುಡರೆಂಬುದೊಂದು ವರ್ಗವಿತ್ತು ಗರುಡರೆಂದರೆ ಅರಸನಿಗೆ ಬೆಂಗಾವಲುಗಳಾಗಿ ನಿಂತು, ಸಾಯುವವರೆಗೆ ಆತನನ್ನು ಸಂರಕ್ಷಿಸಿ, ಆತನು ಸತ್ತೊಡನೆ ತಾವೂ ಸಂತೋಷದಿಂದ ಪ್ರಾಣಬಿಡುವ ಯುದ್ಧಮಲ್ಲರಾದ ಜೀವಸಮರ್ಪಕರ ವರ್ಗವು. ಉತ್ಕಟವಾದ ಸ್ವಾಮಿಭಕ್ತಿಯ ಪರಮಾವಧಿಯನ್ನು ಇವರಲ್ಲಿ ನಾವು ಕಾಣಬಹುದು ತಮ್ಮ ತನುಮನಧನಗಳನ್ನು ಅಕ್ಷರಶಃ ಅರ್ಪಿಸುವ ಕಡುಗಲಿಗಳೇ ಗರುಡರು ಈ ತೆರನ ಸಂಸ್ಥೆಯನ್ನು ನಾವು ಮತ್ಯಾವ ಇತಿಹಾಸದಲ್ಲಿಯೂ ಈ ಪ್ರಮಾಣದಲ್ಲಿ ಕಾಣಲಾರೆವು ಅರಸನಿಗಾಗಿ ಯುದ್ಧದಲ್ಲಿ ಜೀವದ ಹಂಗುದೊರೆದು ಕಾದು ಮಡಿಯುವ ಬಲ್ಲಾಳಗಳನ್ನು ನಾವು ಅನ್ಯತ್ರ ನೋಡಬಹುದು, ಸ್ತ್ರೀಯರ ಮಾನರಕ್ಷಣೆಗೋಸ್ಕರವೂ, ದೇಶದ ಸ್ವಾತಂತ್ರ್ಯರಕ್ಷಣೆಗೋಸ್ಕರವೂ ಜೀವಕೊಡುವ ಧೀರರನ್ನು ನಾವು ಅನ್ಯತ್ರ ನೋಡಬಹುದು ಶಾಂತಕಾಲದಲ್ಲಿ ಕೂಡ, ಸ್ವಾಮಿಭಕ್ತಿಯನ್ನೇ ಜೀವಿತಸರ್ವಸ್ವವಾಗಿಟ್ಟುಕೊಂಡು, ಆ ಮೇರೆಗೆ ಪ್ರತಿಜ್ಞೆಮಾಡಿದ ಶಾಂತವೀರರ ಒಂದು ವರ್ಗವನ್ನೇ ನಾವು ಅನ್ಯತ್ರ ಎಲ್ಲಿಯೂ ಕಾಣಲಾರೆವು ಆದರೆ, ನಮ್ಮ ಕರ್ನಾಟಕದಲ್ಲಿ ಮಾತ್ರ ಅಂಥದೊಂದು ವರ್ಗವು ನಿರ್ಮಾಣವಾಗಿತ್ತು ವಿಷ್ಣುವಿಗೆ ಗರುಡನು ಸದಾ ಅಂಗರಕ್ಷಕನಿದ್ದಂತೆ ಈ ಗರುಡರು ತಮ್ಮ ಅರಸನ ಅಂಗರಕ್ಷಕರು. ಏನೋ, ಏನೂ ಕೈಲಾಗದ ಮೂಢಸ್ವಾಮಿಭಕ್ತಿಯುಳ್ಳ ಹೇಡಿಗಳು ಇವರಲ್ಲ ದೊಡ್ಡದೊಡ್ಡ ದಂಡನಾಯಕರು ಕೂಡ ಹೀಗೆ ಗರುಡರಾಗುವುದು ವಿಶೇಷ ಗೌರವದ ಪದವಿಯೆಂದು ತಿಳಿದುಕೊಳ್ಳುತ್ತಿದ್ದರು ಕುವರ ಲಕ್ಷ್ಮನೂ ಇದೇ ಬಗೆಯ ಒಬ್ಬ ಮಹಾ ಗರುಡನು

ವೀರ ವಂಶಜನಾದ ಈ ಕುವರ ಲಕ್ಷ್ಮನು ಹೊಯ್ಸಳ ನೃಪಕುಲೋತ್ತಮನಾದ ಎರಡನೆಯ ವೀರಬಲ್ಲಾಳನ ಮಂತ್ರಿಶಿಖಾಮಣಿಯು ಆತನು

ಆಹವಾವನಿಯಲ್ಲಿ ಅರಾತಿಭೂಭುಜರನ್ನಿಕ್ಕುವ ತಕ್ಕಿನ ವಿಕ್ರಮಾರ್ಜು
ನನು ಬಲ್ಲಾಳ ನೃಪಾಳನು ಈತನನ್ನು ಅರಮನೆಯ ತೊಟ್ಟಿಲಿನಲ್ಲಿಟ್ಟು
ತನ್ನ ಮಗನಂತೆ ಸಾಕಿ ಸಲುಹಿದ್ದನು ಕುವರ ಲಕ್ಷ್ಮದಂಡಾಧೀಶನೂ
ನೃಪಾಳ ಬಲ್ಲಾಳನೇ ತನ್ನ ಗುರು, ತನ್ನ ದೈವತ, ತನ್ನ ಜೀವಿತ ಸರ್ವ
ಸ್ವವೆಂದು ಬಗೆದಿದ್ದನು ವಸ್ತುತಃ ಲಕ್ಷ್ಮಣನೇನೋ ವೀರಬಲ್ಲಾಳ
ನೃಪನ ಕೈಕೆಳಗಿನ ಆಳು ಆದರೂ ಅವರಿಬ್ಬರಲ್ಲಿ ಆಳರಸರೆಂಬ ಭೇದವು
ತಿಲಪ್ರಾಯವೂ ಇರಲಿಲ್ಲ ವೀರಬಲ್ಲಾಳಭೂಪನೂ ಕುವರ ಲಕ್ಷ್ಮನೂ
ಇಬ್ಬರೂ ಕೂಡಿಯೇ ಧರಾವಳಯವನ್ನು ಪರಮೋತ್ಸವದಿಂದ ಪಾಲಿಸು
ತ್ತಿದ್ದರು ಇಬ್ಬರೂ ಸಮನಾದ ತೇಜವುಳ್ಳವರು ಕುವರ ಲಕ್ಷ್ಮನು
ತನ್ನ ಧನವೆಲ್ಲವನ್ನೂ ಪ್ರಾಣವೆಲ್ಲವನ್ನೂ ವೀರಬಲ್ಲಾಳ ನೃಪನ ಮಾನೋ
ನ್ನತಿಯನ್ನು ಹೆಚ್ಚಿಸುವುದಕ್ಕೂ ಜಯೋನ್ನತಿಯನ್ನು ಬೆಳೆಯಿಸುವುದಕ್ಕೂ
ಮೀಸಲಾಗಿ ಇಟ್ಟಿದ್ದನು ವೀರಲಕ್ಷ್ಮಿಗೆ ನಿವಾಸನಾಗಿದ್ದ ಈ ಕುವರ
ಲಕ್ಷ್ಮನು ತನ್ನ ಅತುಳವಾದ ತೇಜಸ್ಫುರಿತದಿಂದ, ದಕ್ಷಿಣಾಂಭೋಧಿವರ
ಗಿನ ಧರಾವಳಯವನ್ನು ತನ್ನ ಅರಸನಿಗೋಸ್ಕರ ಗೆದ್ದುಕೊಟ್ಟನು ಈ
ವೀರಕುವರಲಕ್ಷ್ಮಚಮೂಪನ ಧಾಳಿಯಗಾಳಿಗೆ ಗಿರಿ-ವನ-ಜಲ ದುರ್ಗ
ಗಳು ಹೊಯ್ದಾಡಿದವು ಆತನು ಅವುಗಳನ್ನು ಇರದೆ ಒಡೆದನು,
ಸುಟ್ಟನು, ಪುಡಿಪುಡಿ ಮಾಡಿದನು ರಣಾಂಗಣದಲ್ಲಿ, ಆತನ ತರವಾ
ರಿಯ ಬಾರಿಗೆ ಮೈಯ್ಯನೊಡ್ಡಲಾರದೆ ಅರಿಗಳು ಹುತ್ತನ್ನು ಹೊಕ್ಕರು,
ಮತ್ತು ಅನೇಕ ಯುದ್ಧಗಳಲ್ಲಿ, ವೀರಶ್ರೀಯು ಆತನ ಭುಜವನ್ನೇರಿ
ಮೆರೆದಳು ಕುವರಲಕ್ಷ್ಮನು ಶೂರನಿದ್ದುದಲ್ಲದೆ ಅರವತ್ತು ನಾಲ್ಕು ಕಲೆ
ಗಳಲ್ಲಿ ನಿಪುಣನೂ ಇದ್ದನು ಆತನು ಆಡಿದ ಮಾತನ್ನು ಎಂದೆಂದಿಗೂ
ತಪ್ಪುವವನಲ್ಲ ಸತ್ಯಪರಿಪಾಲನ ಶೀಲವುಳ್ಳ ಆತನ ಮಾತುಗಳೆಂದರೆ
ಕಲ್ಲೊಳಿಟ್ಟಕ್ಕರಗಳು, ಮಿಕ್ಕವರ ಮಾತುಗಳಂತೆ ನೀರೊಳಿಟ್ಟಕ್ಕರಗಳಲ್ಲ
ಸ್ವಾಮಿಭಕ್ತಿ ಸಮನ್ವಿತನಾದ ಆತನು ಬಲ್ಲಾಳ ಭೂಮಿಪಾಲನನ್ನು ಸದಾ
ವೀತಭಯನನ್ನಾಗಿ ಮಾಡಿ ಆತನ ಜೀವಕ್ಕೆ ಜೀವಕೊಡುವುದಕ್ಕೆ ಭಾಷೆ
ಕೊಟ್ಟಿದ್ದನು ಆ ಮೇರೆಗೆ ಈ ಲಕ್ಷ್ಮದಂಡಾಧೀಶನು ಪ್ರತಿಯೊಂದು
ಯುದ್ಧದಲ್ಲಿ ವೀರಬಲ್ಲಾಳನಿಗೆ ಬೆಂಗಾವಲಾಗಿ ನಿಂತುಕೊಂಡು ಆತನನ್ನು

ಎಡೆಬಿಡದೆ ಸಂರಕ್ಷಿಸುತ್ತಿದ್ದನು. ಆಗಿನ ಕಾಲದಲ್ಲಿ, ಎಡಗಾಲಿನಲ್ಲಿ ಪೊನ್ನತೊಡರೆಂಬ ಬಂಗಾರದ ಆಭರಣವನ್ನೂ ತಳತಳ ತೊಳಗುವ ಗಂಡಪೆಂಡಾರವೆಂಬ ಮುತ್ತಿನ ಪೆಂಡೆಯಿಂದ ಕೂಡಿದ ಆಭರಣವನ್ನೂ ಧರಿಸುವುದು ಅತ್ಯಂತ ಮರ್ಯಾದೆಯ ಚಿಹ್ನವೆಂದು ಭಾವಿಸಲ್ಪಡುತ್ತಿತ್ತು. ಕುವರ ಲಕ್ಷ್ಮಚಮೂಪನಿಗೆ ಈ ಆಭರಣಗಳನ್ನು ಧರಿಸುವ ದೊಡ್ಡ ಗೌರವವು ಪ್ರಾಪ್ತವಾಗಿತ್ತು. ಆ ಮೇರೆಗೆ ಆತನು ಅವುಗಳನ್ನು ಸದಾ ಧರಿಸುತ್ತಿದ್ದನು. ಅವೆರಡೂ ಆಭರಣಗಳು, ಆತನು ಕೊಟ್ಟ ಭಾಷೆಗೆ ಅಚ್ಚೊತ್ತಿದ ಮುದ್ರಿಕೆಗಳೋ ಏನೋ ಎಂಬಂತೆ ಒಪ್ಪುತ್ತಿದ್ದವು. ಈ ಪ್ರಕಾರವಾಗಿ ಈ ಕುವರ ಲಕ್ಷ್ಮನು ವಿಶ್ವಾಸಕ್ಕೆ ಪಾತ್ರನಾದ ವೀರಬಲ್ಲಾಳನ ಅತ್ಯಂತ ಕುಶಲ ಮತ್ತು ಧೀರನಾದ ಸೇವಕನಾಗಿದ್ದನು. ಆತನ ಹೆಂಡತಿಯಾದ ಸುಗ್ಗಲದೇವಿಯೆಂಬವಳು ಪತಿಭಕ್ತಿಪರಾಯಣಳಾದುದಲ್ಲದೆ, ಆತನಂತೆಯೇ ಸ್ವಾಮಿಭಕ್ತಿಪರಾಯಣಳೂ ಆಗಿದ್ದಳು. ಇದಲ್ಲದೆ, ಕುವರ ಲಕ್ಷ್ಮದಂಡಾಧಿಪನ ಕೈಕೆಳಗಿನ ಒಂದು ಸಾವಿರ ಸುಭಟರು ತಮ್ಮ ದೊರೆಯ ಜೀವಕ್ಕೆ ಜೀವ ತೆರಯುವ ಪಣವನ್ನು ತೊಟ್ಟಿದ್ದರು. ಅವರೆಲ್ಲರೂ ಆತನಿಗೆ ನೆರವಾಗಿ ಅನೇಕ ಕಾಳೆಗಗಳಲ್ಲಿ, ಜೀವದ ಮಮತೆಯನ್ನು ಬಿಟ್ಟು ಕಾದಿ ಆತನ ದಿಗ್ವಿಜಯ ಪ್ರಕಟ ಕೀರ್ತಿಪತಾಕೆಯನ್ನು ಅನೇಕ ಕಡೆಗಳಲ್ಲಿ ಕೀಲಿಸಿದ್ದರು. ಇಂತಹ ಈ ಗರುಡವರ್ಗವು ವೀರಬಲ್ಲಾಳ ನೃಪಾಳನು ಮಡಿದೊಡನೆ ಜಗತ್ತಿನಲ್ಲಿ ಹಿಂದೆ ಎಂದೂ ಆಗದ, ಮುಂದೆ ಕೂಡ ಆಗದಂಥ ಅದ್ಭುತವಾದ ಮತ್ತು ಕಲ್ಪನಾತೀತವಾದ ಸಾಹಸ ಕಾರ್ಯವನ್ನು ಮಾಡಿದರು. ಅದಾವುದೆಂದರೆ, ಅವರೆಲ್ಲರೂ ವೀರಬಲ್ಲಾಳನು ಮರಣ ಹೊಂದಿದ ಕೂಡಲೆ, ಅತ್ಯಂತ ಪತಿವ್ರತೆಯರಾದ ಹೆಂಗಸರು ತಮ್ಮ ಪ್ರಾಣವಲ್ಲಭನೊಡನೆ ಸಹಗಮನ ಮಾಡಿ ಪ್ರಾಣಕೊಡುವ ತೆರದಲ್ಲಿ ಇವರೆಲ್ಲರೂ ತಮ್ಮ ರುಂಡಗಳನ್ನು ತಾವೇ ಹಾರಿಸಿಕೊಂಡು ತಮ್ಮ ಪ್ರಾಣಗಳನ್ನು ತಮ್ಮ ದೊರೆಗೆ ಆನಂದದಿಂದ ಅರ್ಪಿಸಿ ವೀರಸ್ವರ್ಗವನ್ನು ಪಡೆದರು!! ಈ ರೀತಿಯಾಗಿ, ಅವರು ದೊರೆಯ ಜೀವಕ್ಕೆ ಜೀವ ಕೊಡುವೆವೆಂಬ ತಮ್ಮ ವಚನವನ್ನು ಅಕ್ಷರಶಃ ಪಾಲಿಸಿದರು! ಸ್ವಾಮಿಭಕ್ತಿಗೋ

ಸ್ಕರ ಹೀಗೆ ಆತ್ಮಹತ್ಯೆಯನ್ನು ಮಾಡಿಕೊಂಡ ಇಂತಹ ವಿಲಕ್ಷಣವಾದ ಉದಾಹರಣೆಯು ಯಾವ ಇತಿಹಾಸದಲ್ಲಿಯೂ ಯಾವ ಕಾಲದಲ್ಲಿಯೂ ದೊರೆಯಲಾರದು! ಕುವರಲಕ್ಷ್ಮನು ಸ್ವಾಮಿಭಕ್ತಿಯನ್ನು ಪರಮಾವಧಿಯಾಗಿ ಮಾಡಿ ತೋರಿಸಿದನು ಈ ಲಕ್ಷ್ಮೀಧರದೇವನು ತನ್ನೊಡನೆ ಅಸುಗಳನ್ನು ತೊರೆದ ಸುಭಟರ, ತನ್ನ ಮನಃಪ್ರಿಯೆಯ ಮತ್ತು ತನ್ನ ಸ್ವಂತದ ಪರಮಾಯುಷ್ಯವೆಲ್ಲವೂ ತನ್ನ ಆಳ್ದನಿಗಾಯ್ತೆನಿಸಿದನು ಎಂತಹ ವಿಲಕ್ಷಣ ಕಡುಗಲಿಯೋ ಈ ಕುವರ ಲಕ್ಷ್ಮನು!! ಇಂತಹ ಅತರ್ಕ್ಯವಾದ ವೀರರಸವು ಯಾರ ಮನಕ್ಕೆ ಅಚ್ಚರಿಯನ್ನುಂಟು ಮಾಡಲಾರದು? ಹೀಗೆ, ಕುವರಲಕ್ಷ್ಮನು ತನ್ನ ಅತುಲವಾದ ಬೀರದೇಳ್ಗೆಯನ್ನು ಅಖಿಲ ದಿಗ್ಭಿತ್ತಿಗಳಲ್ಲಿ ಬರೆಯಿಸಿರುವನು ದೂರಭಕ್ತಿಯಲ್ಲಿ ಗರುಡನಿಗೆ ಸಮಾನನಾದವನು ತಾನೊಬ್ಬನೇ, ತನ್ನ ಹೊರ್ತು ಹಿಂದಕ್ಕೆ ಬೇರೆ ಯಾರೂ ಆಗಿಲ್ಲ ಮುಂದೆ ಆಗುವುದಿಲ್ಲವೆಂಬಂತ ವೀರಭಟನಾದ ಕುಮಾರ ಲಕ್ಷ್ಮನು ಭುವನಪ್ರದೀಪ್ತವಾದ ತನ್ನ ಕೀರ್ತಿಯನ್ನು ಕೊನೆಯವರೆಗೂ ಪಡೆಗಿನುವನು.



ರಣರಂಗಸಿಂಗನಾದ

# ಕುಮಾರ ರಾಮು

---

(೧೩೦೦-೧೩೩೫)

ಕದಂಬ, ಚಾಳುಕ್ಯ, ರಾಷ್ಟ್ರಕೂಟ, ಗಂಗ, ಹೊಯ್ಸಳ ಮುಂತಾದ ರಾಜಮನೆತನಗಳು ಸಾವಿರಾರು ವರ್ಷ ಪರಮೋತ್ಸವದಿಂದ ಆಳಿ, ಕಾಲವಶದಿಂದ ಅಸ್ತವಾಗಿ ಹೋಗಿದ್ದವು ಮುಸಲ್ಮಾನರು ದಕ್ಷಿಣದಲ್ಲಿ ಪ್ರವೇಶಿಸಿ, ದೇವಗಿರಿ, ಒರಂಗಲ್ಲ, ದ್ವಾರಸಮುದ್ರ ಮುಂತಾದ ರಾಜಧಾನಿಗಳನ್ನು ಸೂರೆಗೊಂಡಿದ್ದರು ಇಂತಹ ದುರ್ಧರವಾದ ಸಂಕಟ ಸಮಯದಲ್ಲಿ, ಆನೆಗೊಂದಿಯಲ್ಲಿರುವ ಚಿಕ್ಕದೊಂದು ರಾಜ್ಯವು ರಾಷ್ಟ್ರರಕ್ಷಣೆಗಾಗಿ ಜೀವಗಳನ್ನು ಮುಡಿಪಾಗಿಟ್ಟು ಮುಸಲ್ಮಾನರೊಡನೆ ಕಾದಿ ಅವರಿಗೆ ಆಹುತಿಯಾಯಿತು ಆ ಆಹುತಿಯ ವೀರನೇ ಕುಮಾರ ರಾಮನಾಥನು ಆ ಆಹುತಿಯ ಪುಣ್ಯಬಲದಿಂದಲೇ ಸುಪ್ರಸಿದ್ಧವಾದ ವಿಜಯನಗರ ಸಾಮ್ರಾಜ್ಯದ ಉದಯ

೧೪ನೆಯ ಶತಮಾನದ ಪ್ರಾರಂಭದಲ್ಲಿ ಆನೆಗೊಂದಿಯಲ್ಲಿ ಕಂಪಿಲನೆಂಬೊಬ್ಬ ಅರಸನು ಆಳುತ್ತಿದ್ದನು ಆತನಿಗೆ ಹರಿಹರದೇವಿಯೆಂಬಾಕೆ ಹಿರಿಯ ಹೆಂಡತಿ, ರತ್ನಾಜಿ ಎಂಬಾಕೆ ಕಿರಿಯ ಹೆಂಡತಿ ಹಿರಿಯಳ ಹೊಟ್ಟೆಯಲ್ಲಿ ಹುಟ್ಟಿದವನೇ ಕುಮಾರ ರಾಮನಾಥನು ಈತನು ಪ್ರಬಲ ಪರಾಕ್ರಮಿಯು ಗೋವೆಯಲ್ಲಿ ಒಬ್ಬ ವರ್ತಕನ ಹತ್ತಿರ ಒಂದು ಸುಂದರವಾದ ಮತ್ತು ಎಡವಟ್ಟಾದ ಕುದುರೆಯಿತ್ತು ಕುದುರೆಯನ್ನೇರುವುದು ಎಂತೆಂಥ ಸಾಹಣಿಗಳಿಗೂ ಸಾಧ್ಯವಾಗಿದ್ದಿಲ್ಲ ಅದನ್ನು ಏರಿದವರಿಗೆ ಹತ್ತು ಸಾವಿರ ಟಂಕೆಗಳು ಇನಾಮಾಗಿ ಇಡಲ್ಪಟ್ಟಿದ್ದವು ತೀರ ಚಿಕ್ಕವ

ನಿರುವಾಗಲೇ ಕುಮಾರ ರಾಮನು ಗೋವೆಗೆ ಹೋಗಿ ಧೀರತನದಿಂದ ಆ ಕುದುರೆಯನ್ನೇರಿ ಅದನ್ನು ರಾಜಧಾನಿಗೆ ಓಡಿಸಿಕೊಂಡು ಬಂದನು ಕಂಪಿಲನಿಗೂ ಹೊಯ್ಸಳರಿಗೂ ಮೇಲಿಂದ ಮೇಲೆ ಕಾಳೆಗಗಳಾಗುತ್ತಿದ್ದವು ಒಂದು ಸಲ, ಕುಮಾರ ರಾಮನು ಹೊಯ್ಸಳ ರಾಜ್ಯವನ್ನು ಒಳಹೊಕ್ಕು ಒಂದು ಅಗ್ರಹಾರವನ್ನು ಸುಟ್ಟನು ಕೂಡಲೆ, ಹೊಯ್ಸಳ ಅರಸನಾದ ವೀರಬಲ್ಲಾಳನು ಕಂಪಿಲನೊಡನೆ ಯುದ್ಧಮಾಡಿದನು ಕಂಪಿಲನು ರಾಮನಾಥನನ್ನು ದಂಡಿಗೆ ಅಧಿನಾಯಕನನ್ನಾಗಿ ನೇಮಿಸಿದನು ಕುಮಾರ ರಾಮನಾಥನು ಅಕ್ಕಸಾಲೆಯ ಚಿಕ್ಕ, ಒಕ್ಕಲಿಗ ನಾಗಣ್ಣ, ಮಾದಿಗ ಹಂಪ, ಹೊಲೆಯರ ಹುಲ್ಲ ಮುಂತಾದ ಶೂರ ದಳವಾಯಿಗಳನ್ನಾಡಗೊಂಡು ಯುದ್ಧಕ್ಕೆ ಹೊರಟನು ರಾಮನಾಥನ ದಂಡಿನಲ್ಲಿ ಅನೇಕ ತುರುಕ ರಾವುತರೂ ಕನ್ನಡರಾಯ ರಾವುತರೂ ಗುರ್ಜರ ರಾವುತರೂ ಇದ್ದರು ಹೀಗೆ ಒಂದು ಲಕ್ಷ ಕಾಲಾಳುಗಳು, ೫ ಸಾವಿರ ರಾವುತರು, ಒಂದು ನೂರು ಆನೆಗಳುಳ್ಳ ರಾಯವಡೆಯನ್ನೂ ಬೇಡರ ದಂಡನ್ನೂ ತೆಗೆದುಕೊಂಡು ಬಿಸಿಲಹಳ್ಳಿಯ ಮಾರ್ಗವಾಗಿ ಹೊರಟು ಆತನು ಹೊಯ್ಸಳರ ಸೈನ್ಯಕ್ಕೆ ಇದಿರಾದನು ಹೊಯ್ಸಳರ ಸೈನ್ಯದಲ್ಲಿ ೩ ಲಕ್ಷ ಕಾಲಾಳುಗಳು, ೨೦ ಸಾವಿರ ಕುದುರೆಗಳು, ನಾಲ್ಕು ನೂರು ಆನೆಗಳೂ ಇದ್ದವು ಆ ಯುದ್ಧದಲ್ಲಿ ರಾಮನಾಥನು ಹೊಯ್ಸಳ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿದನು ಆತನ ಶೌರ್ಯಕ್ಕೆ ಅರಿಗಳು ಬೆಳವಳಿಸಿದರು ಆದರೆ, ಮುಸಲ್ಮಾನರು ಹಿಂದೂಸ್ಥಾನದಲ್ಲಿ ಹಾವಳಿಯನ್ನು ಮಾಡುತ್ತಿದ್ದ ಆಗಿನ ಕಾಲವಲ್ಲಿ, ಹಿಂದೂ ಅರಸರು ಹೀಗೆ ತಮ್ಮತಮ್ಮೊಳಗೆ ಕಲಹಮಾಡುವುದು ಲೇಸಲ್ಲವೆಂದು ಸುಜ್ಞರಾದ ಮಂತ್ರಿಗಳು ಉಪದೇಶಮಾಡಿದ್ದರಿಂದ, ಆ ಇಬ್ಬರು ಅರಸರಲ್ಲಿ ಒಪ್ಪಂದವಾಯಿತು ರಾಜಧಾನಿಗೆ ಬಂದ ಬಳಿಕ, ಕಂಪಿಲನು ರಾಮನಾಥನಿಗೆ ರಾಜ್ಯವನ್ನೊಪ್ಪಿಸಿ, ತಾನು ಸ್ವಸ್ಥಚಿತ್ತದಿಂದಿದ್ದನು

ಆ ಕಾಲಕ್ಕೆ ಒರಂಗಲ್ಲಿನಲ್ಲಿ, ವೀರರುದ್ರದೇವನೆಂಬವನು ಆಳುತ್ತಿದ್ದನು ರಾಮನಾಥನು ತೆಲುಗರ ಗಂಡ, ಮೂವರು ರಾಯರ ಗಂಡ

ಮುಂತಾದ ಬಿರುದುಗಳನ್ನು ಧರಿಸಿದ್ದನ್ನು ಕೇಳಿ ಪ್ರತಾಪ ರುದ್ರದೇವನು ಕೋಪಗೊಂಡನು ಒಂಭತ್ತು ಲಕ್ಷ ಕಾಲಾಳುಗಳು, ಒಂದು ಲಕ್ಷ ರಾವುತರು, ಒಂದು ನೂರು ಆನೆಗಳುಳ್ಳ ಮಹಾ ಸೈನ್ಯವನ್ನು ತೆಗೆದುಕೊಂಡು ಬಂದು, ಆತನು ಕಂಪಿಲನ ರಾಜ್ಯದ ಮೇಲೆ ಧಾಳಿ ಇಟ್ಟನು ಕಂಪಿಲನು ೨ ಲಕ್ಷ ಕಾಲಾಳುಗಳು, ೧೨ ಸಾವಿರ ರಾವುತರು, ೪೦೦ ಆನೆಗಳುಳ್ಳ ಸೈನ್ಯದೊಂದಿಗೆ ಆತನ ಸೈನ್ಯದ ಮೇಲೆ ಏರಿ ಬಿದ್ದನು ಕುಮಾರ ರಾಮನು ಆಗ ೧೮ ವರ್ಷದ ಬಾಲಕನು ಆದರೂ ಆತನು ಸೈನ್ಯದ ಮುಖಂಡತ್ವವನ್ನು ತಾನೇ ವಹಿಸಿ, ಉರುವಣೆಯಿಂದ ಕಾದು, ಪ್ರತಾಪರುದ್ರನ ಸೈನ್ಯವನ್ನು ಓಡಿಸಿಬಿಟ್ಟನು ಆಗ, ಪ್ರತಾಪರುದ್ರದೇವನು ಶರಣು ಬಂದು ಕಂಪಿಲನೊಡನೆ ಒಪ್ಪಂದಮಾಡಿಕೊಂಡನು

ಕಾಕತೀಶ್ವರನಾದ ಪ್ರತಾಪರುದ್ರದೇವನನ್ನು ಕಂಪಿಲನು ಸೋಲಿಸಿದ ಸುದ್ದಿಯನ್ನು ಗಜಪತಿಯರಸನಾದ "ಕರಿಪತಿ ಕಪಿಲೇಶ್ವರನು" ಕೇಳಿ, ರಾಮನಾಥನೊಡನೆ ಯುದ್ಧಕ್ಕೆ ಅನುವಾದನು ೩ ಲಕ್ಷ ಕಾಲಾಳುಗಳು, ೮ ಸಾವಿರ ಕುದುರೆಗಳು, ೮೦೦ ಆನೆಗಳನ್ನು ತೆಗೆದುಕೊಂಡು ಆ ಗಜಪತಿ ಅರಸನು ಕೃಷ್ಣವೇಣಿಯನ್ನು ದಾಟಿ ಕಂಪಿಲನೊಡನೆ ಕಾಳಗವಾಡಿದನು ಗಜಪತಿಯ ಸೈನಿಕರು ರಾಮನಾಥನನ್ನು ಸುತ್ತುಗಟ್ಟಲು ಯತ್ನಿಸಿದರು ಆದರೆ, ಕುಮಾರ ರಾಮನು ಅವರಲ್ಲಿಯ ಪ್ರಮುಖರಲ್ಲರನ್ನೂ ಕೊಂದು, ಗಜಪತಿಯನ್ನು ಗಂಡುಗೆಡಿಸಿದನು ಅರಿಭೀಕರನಾದ ರಾಮನಾಥನು ಪರಸೈನ್ಯವನ್ನು ಅಟ್ಟಿ ರಾಜಧಾನಿಗೆ ಮರಳಿದನು

ದಿಲ್ಲಿಯ ಸುಲ್ತಾನನಾದ ಮಹಮದ್ ತಗಲಖನು ಕುಮಾರ ರಾಮನ ಕೊಲ್ವಚಲವನ್ನೂ ಗೆಲ್ವಬಡಗನ್ನೂ ಕೇಳಿದ್ದನು ಆತನು ತನ್ನ ಮಗಳಿಗೆ ತಕ್ಕ ವರನನ್ನು ಹುಡುಕುವುದಕ್ಕೆ ನಾನಾ ದೇಶಗಳಿಗೆ ಬೇಹಿನವರನ್ನು ಕಳುಹಿಸಿದ್ದನು ಆ ಬೇಹಿನವರು ಕುಮಾರ ರಾಮನ ಚಿತ್ರಪೊಂದನ್ನು ದೊರಕಿಸಿ, ಅದನ್ನು ಸುಲ್ತಾನನ ಮಗಳಿಗೆ ಕೊಟ್ಟರು ಕುಮಾರ ರಾಮನ ಆ ಸುಂದರವಾದ ರೂಪವನ್ನು ಚಿತ್ರದಲ್ಲಿ ನೋಡಿದೊಡನೆ, ಅವಳು ಆತನನ್ನು ವರಿಸಬೇಕೆಂದು ನಿಶ್ಚಯಿಸಿದಳು ಸುಲ್ತಾನನು ಬಿದರೆ,

ನಿಂಬಾಪುರ, ಜಂಬುಖಂಡಿ, ರಾಯಚೂರು ಮುಂತಾದ ಊರುಗಳನ್ನು ವರದಕ್ಷಿಣೆಯಾಗಿ ಸ್ವೀಕರಿಸಿ, ರಾಮನು ತನ್ನ ಮಗಳ ಪಾಣಿಗ್ರಹಣವನ್ನು ಮಾಡಬೇಕೆಂದು ಕಂಪಿಲನನ್ನು ಕೇಳಿಕೊಂಡನು ಅದಕ್ಕೆ ಕಂಪಿಲನು ಒಪ್ಪಲಿಲ್ಲ ಆಗ, ಸುಲ್ತಾನನು ತನ್ನ ಶಕ್ತಿಬಲದಿಂದ ಕುಮಾರ ರಾಮನನ್ನು ಕರದೊಯ್ಯಬೇಕೆಂದು ಮನಮಾಡಿದನು ಅಷ್ಟರಲ್ಲಿ, ಬಾಹುದ್ದೀನನೆಂಬ ಸುಲ್ತಾನನ ಅಣ್ಣನ ಮಗನು ಬಂಡೆಬ್ಬಿಸಿ, ದಕ್ಷಿಣ ದೇಶಕ್ಕೆ ಬಂದ ಹೆದ್ದೊರೆಯನ್ನು ಎಂದರೆ ಕೃಷ್ಣಾನದಿಯನ್ನು ದಾಟಿ ಕಂಪಿಲನ ರಾಜ್ಯವನ್ನು ಹೊಕ್ಕನು ಕಂಪಿಲನು ತನಗೆ ಆಶ್ರಯವನ್ನು ಕೊಡಬೇಕೆಂದು ಆತನು ಬೇಡಿಕೊಂಡನು ಕುಮಾರ ರಾಮನು ಶರಣಾಗತರನ್ನು ರಕ್ಷಿಸುವುದು ಕರ್ತವ್ಯವೆಂದೂ ಸುಲ್ತಾನನ ರೋಷವನ್ನು ಲೆಕ್ಕಿಸದೆ ಬಾಹ ಉದ್ದೀನನಿಗೆ ಆಶ್ರಯಕೊಡಲೇಬೇಕೆಂದೂ ತಂದೆಗೆ ಅರುಹಿದನು ಅದಕ್ಕೆ ಕಂಪಿಲನು ಒಪ್ಪಿ ಬಾಹ-ಉದ್ದೀನನನ್ನು ತನ್ನ ರಾಜಧಾನಿಯಲ್ಲಿ ಇಟ್ಟುಕೊಂಡನು ಈ ಸುದ್ದಿಯನ್ನು ಕೇಳಿದೊಡನೆ ಸುಲ್ತಾನನು ಮತ್ತಷ್ಟು ಕ್ರೋಧಸಂತಪ್ತನಾಗಿ ಕಂಪಿಲನ ಮೇಲೆ ದಂಡನ್ನು ಕಳುಹಿಸಿದನು ನೇಮಿಖಾನನೆಂಬ ಸರದಾರನು ಸುಲ್ತಾನನ ಅಪ್ಪಣೆಯನ್ನು ತೆಗೆದುಕೊಂಡು, ೪ ಲಕ್ಷ ಕುದುರೆಗಳ, ೩ ಸಾವಿರ ಆನೆಗಳ, ೨ ಸಾವಿರ ಒಂಟೆಗಳೊಂದಿಗೆ ಕರ್ನಾಟಕದ ಮೇಲೆ ದಾಳಿಯಿತ್ತು ಬಂದನು ಒಕ್ಕಲಿಗ ಮತ್ತು ಬೇಡರ ಪಡೆಯನ್ನು ಹುರಿದುಂಬಿಸಿಕೊಂಡು ಬೈಚಪ್ಪನೆಂಬ ಮಂತ್ರಿಯು ಅವರೊಡನೆ, ಕುಮ್ಮಟದುರ್ಗಕ್ಕೆ ಹೋಗಿ ನಿಂತನು ನೇಮೀಖಾನನು ಒರೆಗಲ್ಲು, ಬಾದಾಮಿ, ಮುದಗಲ್ಲು ಮುಂತಾದ ಕೋಟೆಗಳನ್ನು ತೆಗೆದುಕೊಂಡು ಹೆದ್ದೊರೆಗೆ ಬಂದನು ಇದನ್ನು ಕೇಳಿ, ಕುಮಾರ ರಾಮ ಮತ್ತು ಬಾಹ ಉದ್ದೀನ ಇವರೊಂದಿಗೆ ಕಂಪಿಲನೂ ಕುಮ್ಮಟದುರ್ಗಕ್ಕೆ ಬಂದನು ಅಲ್ಲಿ, ಕರ್ನಾಟಕ ಸೈನ್ಯಕ್ಕೂ ಸುಲ್ತಾನನ ಸೈನ್ಯಕ್ಕೂ ಘೋರವಾದ ಸಂಗ್ರಾಮವಾಯಿತು ಗಂಡುದೋರ್ಪರಿಗೆ ಮಾರಿಯಾದ ಕುಮಾರರಾಮನೂ ಬಲ್ಲಿದರಿಗೆ ಘಟಸರ್ಪನಾದ ಕಂಪಿಲನೂ ಮೊದಲನೆಯ ದಿವಸದ ಕಾಳಗದಲ್ಲಿ ಶತ್ರುಗಳನ್ನು ಗೆದ್ದರು ಮರುದಿವಸ ನೇಮೀಖಾನನು ಕುಮ್ಮಟದುರ್ಗದ ಮೇಲೆ ಲಗ್ಗೆ ಹತ್ತಿದನು ಆದರೆ, ಕುಮಾರ ರಾಮನು

ಅತ್ಯಂತ ದೋರ್ವಿಕ್ರಮಾಡಂಬರದಿಂದ ಕಾದಿ, ನೇಮೀಖಾನನನ್ನು ಹಿಮ್ಮೆಟ್ಟಿಸಿದನು ಕಂಪಿಲನೂ ಕುಮಾರ ರಾಮನೂ ತಮ್ಮ ರಾಜಧಾನಿಯಾದ ಹೊಸದುರ್ಗಕ್ಕೆ ಬಂದರು ನೇಮೀಖಾನನು ದಿಲ್ಲಿಗೆ ಓಡಿಹೋಗಿ, ತನ್ನ ಸೋಲಿನ ಸುದ್ದಿಯನ್ನು ಸುಲ್ತಾನನಿಗೆ ಅರುಹಿದನು ಸುಲ್ತಾನನು ಅದನ್ನು ಕೇಳಿ ಅಂಗುಷ್ಟದಿಂದ ಮಸ್ತಕದವರೆಗೆ ಬೆಂಕಿಯಾದನು

ಇಷ್ಟರಲ್ಲಿ, ಹಿಮಋತುವು ಹೋಗಿ ಚೈತ್ರಮಾಸವು ಪ್ರಾರಂಭವಾಗಿತ್ತು ಆ ಮಾಸದಲ್ಲಿ ಶೂಲಬ್ರಹ್ಮನ ಪೂಜೆಯೆಂಬ ಉತ್ಸವವು ಕಂಪಿಲನ ರಾಜಧಾನಿಯಲ್ಲಿ ನಡೆಯಿತು ಆ ಉತ್ಸವಕ್ಕೆ ಕಂಪಿಲನು ತನ್ನ ರಾಜ್ಯದೊಳಗಿನ ಯಾವತ್ತು ಬಂಟರನ್ನು ಕರೆಯಿಸಿದ್ದನು ವೀರರ ಆಟನೋಟಗಳು ನಡೆದಿದ್ದವು ಕಂಪಿಲನ ಕಿರಿಯ ಹೆಂಡತಿಯಾದ ರತ್ನಾಜಿ ಎಂಬವಳು ತನ್ನ ಅರಮನೆಯೊಳಗೆ ನಿಂತುಕೊಂಡು ಆ ಆಟಗಳನ್ನು ನೋಡುತ್ತಿದ್ದಳು ಅವಳ ಕಣ್ಣು ಆಟವಾಡುವ ಕುಮಾರರಾಮನ ಮೇಲೆ ಬಿದ್ದಿತು ಕೂಡಲೆ, ಅವಳು ಆತನಿಗೆ ಮೋಹಿಸಿದಳು ಹೊತ್ತು ಸಾಧಿಸಿ ಕುಮಾರ ರಾಮನನ್ನು ಒಲಿಸುವುದನ್ನು ನಿಶ್ಚಯಿಸಿದಳು ಒಂದು ದಿನ ಕುಮಾರ ರಾಮನು ಮುತ್ತಿನ ಚಂಡಿನಿಂದ ಆಡುತ್ತಿರಲು, ಆಕಸ್ಮಿಕವಾಗಿ ಆ ಚಂಡು ರತ್ನಾಜಿಯ ಅರಮನೆಯಲ್ಲಿ ಬಿದ್ದಿತು ರಾಮನು ಅದನ್ನು ತೆಗೆದುಕೊಳ್ಳುವುದಕ್ಕೆ ಆ ಅರಮನೆಯಲ್ಲಿ ಹೊಕ್ಕನು ರತ್ನಾಜಿಯು ಆ ಸಂಧಿಯನ್ನು ಸಾಧಿಸಿ ತನ್ನ ಕಾಮುವನ್ನು ತೃಪ್ತಿಗೊಳಿಸುವುದಕ್ಕೆ ಪರಿಪರಿಯಿಂದ ಬೇಡಿಕೊಂಡಳು ಶೃಂಗಾರ ಚೇಷ್ಟೆಗಳನ್ನು ಮಾಡಿದಳು ಆದರೆ, ಪರದಾರ ಸೋದರನಾದ ಕುಮಾರರಾಮನು ಅವುಗಳಿಗೆ ಮನ ಸೋಲುವನೇ ? ಆ ಧೀರನು ಯುಕ್ತಿಯಿಂದ ಅಲ್ಲಿಂದ ಜಾರಿ ಹೊರಗೆ ಹೋದನು ಕೂಡಲೆ, ರತ್ನಾಜಿಯು ಆತನ ಮೇಲೆ ಕಡುಮುಳಿದು ಸೇಡು ತೀರಿಸಿಕೊಳ್ಳುವುದನ್ನು ಗೊತ್ತುಮಾಡಿದಳು ಕುಮಾರರಾಮನು ತನ್ನ ಪಾತಿವ್ರತ್ಯವನ್ನು ಭಂಗಪಡಿಸುವುದಕ್ಕೆ ಉದ್ಯುಕ್ತನಾಗಿರುವನೆಂದು ಅವಳ ಗಂಡನ ಮುಂದೆ ದೂರು ಹೇಳಿದಳು ಕಂಪಿಲನು ಕುಮಾರ ರಾಮನನ್ನು ಕೊಲೆಗಡಕರ ಕೈಗೆ ಕೊಟ್ಟನು ಮಂತ್ರಿಯಾದ ಬೈಚಪ್ಪನು ಕೊಲೆಗಡಕರಿಂದ ಆತ

ನನ್ನ ಪಾರುಮಾಡಿಕೊಂಡು ಆತನನ್ನೂ ಆತನನ್ನು ನೆರೆನಂಬಿದ; ಆತನ ಸಂಗಡಿಗರನ್ನೂ ಒಂದು ಗವಿಯಲ್ಲಿ ಬಚ್ಚಿಟ್ಟು, ಕುಮಾರ ರಾಮನನ್ನೂ ಆತನ ಹೆಂಡಂದಿರನ್ನೂ ತಾನು ಕೊಲೆಗಡಕರಿಂದ ಕೊಲ್ಲಿಸಿದೆನೆಂದು ಬೈಚಪ್ಪ ಮಂತ್ರಿಯು ಅರಸನಿಗೆ ನಿವೇದಿಸಿದನು ಕುಮಾರ ರಾಮನಾಥನು ಸತ್ತನೆಂಬ ಸುದ್ದಿಯನ್ನು ಸುಲ್ತಾನನು ಕೇಳಿ ಪುನಃ ನೇಮೀಖಾನನನ್ನು ಕಂಪಿಲನನ್ನು ಸರೆ ಹಿಡಿದುಕೊಂಡು ಬರುವುದಕ್ಕೆ ಕಳುಹಿಸಿದನು ಆತನು ಮೂರುಲಕ್ಷ ಒಂಬತ್ತುಸಾವಿರ ಸೈನ್ಯದೊಂದಿಗೆ ದಕ್ಷಿಣಕ್ಕೆ ಹೊರಟನು ಇದನ್ನು ಕೇಳಿ, ಕಂಪಿಲನು ಕಂಪಿತ ಹೃದಯನಾದನು ಆಗ, ಆತನಿಗೆ ಶೂರ ಪುತ್ರನಾದ ರಾಮನಾಥನ ನೆನಪು ಆಯಿತು ಆದರೆ, ರಾಮನಾಥನು ಸತ್ತುಹೋಗಿದ್ದನೆಂದು ಆತನ ತಿಳವಳಿಕೆಯಾಗಿದ್ದರಿಂದ ಆ ನೆನಪು ಶೋಕದಲ್ಲಿಯೇ ಸಮಾಪ್ತವಾಯಿತು ಕಂಪಿಲನು ಸೈನ್ಯಸನ್ನಾಹವನ್ನು ಮಾಡುವುದಕ್ಕೆ ಬೈಚಪ್ಪ ಮಂತ್ರಿಗೆ ಆಜ್ಞಾಪಿಸಿದನು ಅಷ್ಟರಲ್ಲಿ ನೇಮೀಖಾನನು ಕೃಷ್ಣಾನದಿಯನ್ನು ದಾಟಿದ್ದನು ಕಂಪಿಲನು ಗಾಬರಿಗೊಂಡು ಬೈಚಪ್ಪನನ್ನು ಒಳಿತಾಗಿ ಬೈದನು ಬೈಚಪ್ಪನು ಕಂಪಿಲನಿಗೆ ಧೈರ್ಯವನ್ನು ಕೊಟ್ಟು, ಅದ್ವಿತೀಯ ಶೂರನಾದ ಒಬ್ಬ ಬಂಟನು ಕಂಪಿಲನ ಪರವಾಗಿ ಯುದ್ಧಮಾಡುವನೆಂದು ಹೇಳಿದನು ಬೈಚಪ್ಪನು ದೊಡ್ಡದೊಂದು ಸೈನ್ಯದೊಂದಿಗೆ ನೇಮೀಖಾನನ ಮೇಲೆ ಸಾಗಿಹೋಗಬೇಕೆಂದು ಕಂಪಿಲನು ಬೈಚಪ್ಪನಿಗೆ ಆಜ್ಞಾಪಿಸಿದನು ಕುಮ್ಮಟದುರ್ಗದಲ್ಲಿ ಭಯಂಕರ ಕಾಳಗಕ್ಕೆ ಮೊದಲಾಯಿತು ಕಂಪಿಲನ ಸೈನಿಕರು ಅತ್ಯಂತ ಸಾಹಸದಿಂದ ಕುಮ್ಮಟದುರ್ಗವನ್ನು ಸಂರಕ್ಷಿಸುವುದಕ್ಕೆ ಪ್ರಯತ್ನಪಟ್ಟರು ರಾಮನಾಥನು ಸತ್ತಿದ್ದರಿಂದ, ಕುಮ್ಮಟದುರ್ಗವನ್ನು ಸಂರಕ್ಷಿಸುವ ಜಿಗುಟುಳ್ಳ ಶೂರರಾರೂ ಇಲ್ಲವೆಂದು ನೇಮೀಖಾನನು ಸ್ವಸ್ಥಚಿತ್ತದಿಂದಿದ್ದನು ಇತ್ತ ಬೈಚಪ್ಪದಂಡನಾಯಕನು ರಾಮನಾಥನನ್ನೂ ಆತನ ಸಂಗಡಿಗರನ್ನೂ ಗವಿಯಿಂದ ಹೊರಗೆ ತೆಗೆದು ಅವರನ್ನು ಯುದ್ಧಕ್ಕೆ ಸಜ್ಜುಗೊಳಿಸಿದ್ದನು ತಡೆಯಲ್ಲಿದ್ದ ವೀರರಸಪ್ರವಾಹವು ಧುಮ್ಮಿಕ್ಕಿ ಹರಿಯಿತೆಂಬಂತೆ ಪರಬಲಕೃತಾಂತನಾದ ರಾಮನಾಥನು ಕಾದಿ, ನೇಮೀಖಾನನ ಸೈನಿಕರನ್ನು ವಿಧ್ವಂಸಮಾಡಿ, ಅದ್ವಿತೀಯವಾದ ಶೌರ್ಯವನ್ನು ತೋರಿಸಿದನು.

ರಣರಂಗಶೂದ್ರಕನಾದ ನೇಮೀಖಾನನು ಸಂಪೂರ್ಣವಾಗಿ ಪರಾಜಯ ಹೊಂದಿ ಬೆಂಗೊಟ್ಟೋಡಿದನು ಹೀಗೆ, ರಾಮನಾಥನು ವಿಜಯಮಾಲೆಯನ್ನು ಕೊರಳಿನಲ್ಲಿ ಹಾಕಿಕೊಂಡು ತಂದೆಯ ಸನ್ನಿಧಾನಕ್ಕೆ ಬಂದನು. ತಂದೆಯು ಅತ್ಯಂತ ಆಶ್ಚರ್ಯಚಕಿತನಾದನು ಬೈಚಪ್ಪನು ಆಗ ನಿಜ ವೃತ್ತಾಂತವನ್ನು ನಿವೇದಿಸಿ, ಕಂಪಿಲನನ್ನು ಆನಂದಗೊಳಿಸಿದನು ರಾಮನಾಥನು ಪ್ರಕಟನಾದ ಸಂಗತಿಯನ್ನು ಕೇಳಿ, ರತ್ನಾಜಿಯು ಆತ್ಮಹತ್ಯೆವನ್ನು ಮಾಡಿಕೊಂಡಳು !

ನೇಮೀಖಾನನು ಪುನಃ ಸೋತುಬಂದುದನ್ನು ಕೇಳಿ ಸುಲ್ತಾನನು ಅತ್ಯಂತ ರೋಷಿತನಾದನು "ರಾಮನಾಥನನ್ನು ಸರಿಗಟ್ಟುವ ಧೀರರು ನನ್ನ ಸೈನಿಕರಲ್ಲೊಬ್ಬರೂ ಇಲ್ಲವೇ?" ಎಂದು ಗದ್ದರಿಸಿದನು ಸುಲ್ತಾನನ ದ್ವಾರಪಾಲಿಕೆಯಾದ ಮಾತಂಗಿ ಎಂಬ ಮಾದರವಳೊಬ್ಬಳು ಮುಂದೆ ಬಂದು, ಸುಲ್ತಾನನು ಆಜ್ಞಾಪಿಸಿದರ, ತಾನು ರಾಮನಾಥನನ್ನು ಸೋಲಿಸಿ ಬರುವೆನೆಂದು ಹೇಳಿದಳು ಮೊದಲು ಸುಲ್ತಾನನಿಗೆ ಅವಳ ಮಾತಿನಲ್ಲಿ ನಂಬಿಗೆ ಹುಟ್ಟಲಿಲ್ಲ ಆದರೆ ಅವಳು ಪರಿಪರಿಯಾಗಿ ಆಶ್ವಾಸನ ಕೊಟ್ಟದ್ದರಿಂದ, ಸುಲ್ತಾನನು ದಂಡಿನೊಡನೆ ಅವಳನ್ನು ದಕ್ಷಿಣಕ್ಕೆ ಕಳುಹುವುದಕ್ಕೆ ಒಡಂಬಟ್ಟನು ಈ ಮಾತಂಗಿಯು ಸುಲ್ತಾನನಿಂದ ವೀಳ್ಯವನ್ನು ಸ್ವೀಕರಿಸಿ ಮಹಾ ಸೇನಾಸಾಗರದೊಡನೆ ಕಂಪಿಲನ ರಾಜ್ಯದ ಮೇಲೆ ದಂಡೆತ್ತಿ ಬಂದಳು ಅವಳು ನೆಟ್ಟಗೆ ಬಂದು ಕುಮಾರರಾಮನು ಇದ್ದ ಕುಮ್ಮಟದುರ್ಗವನ್ನೇ ಮುತ್ತಿದಳು ಸುಲ್ತಾನನಿಂದ ಓಡಿ ಬಂದ ಬಾಹ-ಉದ್ದೀನನನ್ನು ಕುಮಾರರಾಮನು ಸುಲ್ತಾನನ ವಶಕ್ಕೆ ಒಪ್ಪಿಸಬೇಕೆಂದೂ ಸುಲ್ತಾನನ ಮಗಳನ್ನು ಲಗ್ನವಾಗಬೇಕೆಂದೂ ರಾಮನಾಥನಿಗೆ ಮಾತಂಗಿಯು ಹೇಳಿಕಳುಹಿದಳು ಶರಣಾಗತರನ್ನು ಒಪ್ಪಿಸುವುದು ತನ್ನ ಧರ್ಮವಲ್ಲವೆಂದೂ ಮುಸಲ್ಮಾನರ ಮಗಳನ್ನು ಮದುವೆಯಾಗುವಂತಹ ಅಧರ್ಮದ ಕೃತ್ಯವನ್ನು ಮಾಡಲಾರೆನೆಂದೂ ರಾಮನಾಥನು ನಿಕ್ಷುಣ್ಣವಾಗಿ ಉತ್ತರ ಕೊಟ್ಟನು ಆಗ, ಯುದ್ಧಕ್ಕೆ ಪ್ರಾರಂಭ

ವಾಯಿತು ರಾಮನಾಥನು ಅತ್ಯಂತ ರಭಸದಿಂದ ಕಾದಿ, ಮಾತಂಗಿಯ ಸೈನ್ಯವನ್ನು ಇಬ್ಬದಿಯಾಗಿ ಮಾಡಿ ಒಳಗೆ ಹೊಕ್ಕನು ಆತನು ಸಿಂಹ ಗರ್ಜನೆಯನ್ನು ಮಾಡಿ, ಶತ್ರುಸೈನ್ಯವನ್ನು ನುಚ್ಚುನುರಿಯಾಗಿ ಮಾಡಿ ದನು ಆದರೆ ಆತನ ಸೈನ್ಯವು ತುಂಬಿ ಬಂದಿತು ಇತ್ತ ಆತನು ಪರಬಳ ವನ್ನು ಹೊಕ್ಕು, ಅದನ್ನು ಈಡಾಡುವುದರಲ್ಲಿ ತೊಡಗಿರುವಾಗ ಅತ್ತ ಮತ್ತೊಂದು ಭಾಗದಲ್ಲಿ ಮಾತಂಗಿಯ ಸೈನಿಕರು ಕಂದಕಗಳನ್ನು ಹುಗಿದು ಕೋಟೆಯ ಗೋಡೆಗಳನ್ನು ಏರಿ, ಕೋಟೆಯ ಒಳಗೆ ಹೊಕ್ಕಿದ್ದರು. ಕೋಟೆಯ ಒಳಗಿದ್ದವರು ಬಿಸಿಬಿಸಿ ಉಸುಬಿನ ಚೀಲಗಳನ್ನು ಎರಚಿಯೂ ಸುಡುವ ಎಣ್ಣೆಯನ್ನು ನೆತ್ತಿಯ ಮೇಲೆ ಸುರುವಿಯೂ ಶತ್ರುಗಳನ್ನು ಹಿಂದಕ್ಕಟ್ಟುವುದಕ್ಕೆ ವಿಶ್ವಪ್ರಯತ್ನ ಮಾಡಿದರು ಆದರೆ ಸಾಧ್ಯವಾಗ ಲಿಲ್ಲ ರಾಮನಾಥನು ನೆರೆನಂಬಿದ ಹೊಲೆಯರ ಹುಲ್ಲ ಮತ್ತು ಮಾದಿಗರ ಹಂಪ ಮುಂತಾದ ಬಂಟರೆಲ್ಲರೂ ಈ ಕಾಳಗದಲ್ಲಿ ಮಡಿದು ಹೋದರು ಕೋಟೆಯ ಕೆಳಗಿನ ಊರು ಶತ್ರುಗಳ ಕೈವಶವಾಯಿತು ಶತ್ರುಗಳು ಊರಿಗೆ ಬೆಂಕಿಯನ್ನು ಹಚ್ಚಿದರು ಆಗ ಮಾತ್ರ, ರಾಮನಾಥನು ಚಿಂತಾ ಕ್ರಾಂತನಾದನು ಆತನು ಕೋಟೆಯ ಒಳಗೆ ಹೋಗಿ ನೋಡುತ್ತಾನ! ಅರಮನೆಯ ಹೆಂಗಸರೆಲ್ಲರೂ ದೊಡ್ಡದೊಂದು ಅಗ್ನಿಯನ್ನು ಹೊತ್ತಿಸಿ, ಅದರಲ್ಲಿ ಆಹುತಿಯಾಗುವುದಕ್ಕೆ ಸಿದ್ಧರಾಗಿದ್ದರು! ಒಬ್ಬರನ್ನೊಬ್ಬರು ಆಲಿಂಗನ ಮಾಡಿಕೊಂಡು, ಆತ್ಮಾಹುತಿಯ ಧಾರ್ಮಿಕ ವಿಧಿಗಳನ್ನು ಆನಂದದಿಂದ ನೆರವೇರಿಸುತ್ತಿದ್ದರು! ರಾಮನಾಥನು ಪವಿತ್ರವಾದ ದೇವಾಲಯವನ್ನು ಹೊಕ್ಕು ದೇವಾಧಿದೇವನಾದ ಶಿವನನ್ನು ಪೂಜಿಸಿದನು ಮರಳಿ ಬಂದು, ರಾಮನಾಥನು ನೆರೆದಿರುವ ಸ್ತ್ರೀಯರಿಗೆ ಅಗ್ನಿಕುಂಡದಲ್ಲಿ ಹಾರಿ ಶೂರತನದಿಂದ ಸತ್ತು ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳುವುದಕ್ಕೆ ಉದ್ಬೋಧಿಸಿದನು ಆ ಬಳಿಕ, ಅವರೆಲ್ಲರೂ ಒಬ್ಬೊಬ್ಬರೇ ಅಗ್ನಿಕುಂಡ ದಲ್ಲಿ ಹಾರಿಕೊಂಡು ಸಂತೋಷದಿಂದ ಪ್ರಾಣವನ್ನು ತೊಲಗಿದರು!! ರಾಮನಾಥನು ಮುತ್ತು ರತ್ನಗಳನ್ನೂ ದ್ರವ್ಯವನ್ನೂ ಮಿಕ್ಕ ಬೆಲೆಯುಳ್ಳ ಪದಾರ್ಥಗಳನ್ನೂ ಕೂಡಿಸಿ, ಬಾಹುಉದ್ದೀನನ ಕಡೆಗೆ ಕಳುಹಿಸಿಕೊಟ್ಟು ತಾನು ಪೂರ್ಣಾಹುತಿಯನ್ನು ಕೊಡುವುದಕ್ಕೆ ಕಂಕಣಬದ್ಧನಾದನು.

ರಾಮನಾಧನೂ ಆತನ ಸಂಗಡಿಗರೂ ಶತ್ರುಗಳ ಸೈನ್ಯವನ್ನು ಒಳನುಗ್ಗಿ, ಇರಿದು ಕಾದಾಡಿ ಕೊನೆಗೆ ಪ್ರಾಣಬಿಟ್ಟರು !! ಮಾತಂಗಿಯು ವಿಜಯ ಹೊಂದಿದಳು, ರಾಮನಾಧನ ರುಂಡವನ್ನು ಸುಲ್ತಾನನ ಕಡೆಗೆ ದಿಲ್ಲಿಗೆ ಕಳುಹಿಸಿದಳು ರಾಮನಾಧನ ರುಂಡವನ್ನು ನೋಡಿದೊಡನಯೆ, ಸುಲ್ತಾನನ ಮಗಳು ಹೌಹಾರಿ ತಾನೂ ಪ್ರಾಣವನ್ನು ತೊಲಗಿದಳು !!

ಈ ರೀತಿಯಾಗಿ, ಪರದಾರಸೋದರನೂ ರಣರಂಗಸಿಂಗನೂ ಆದ ಕುಮಾರರಾಮನು ಅದ್ವಿತೀಯವಾದ ಸಾಹಸವನ್ನೂ ನಿಷ್ಕಲಂಕವಾದ ಶೀಲ ವನ್ನೂ ಜಗತ್ತಿಗೆ ತೋರ್ಪಡಿಸಿ, ದುರ್ದೈವದಿಂದ ಕುಮ್ಮಟದುರ್ಗದ ಕಾಳಗದಲ್ಲಿ ಕಾಲವಶನಾದನು ಕುಮ್ಮಟದುರ್ಗದಲ್ಲಿ ಕರ್ನಾಟಕದ ವೀರ ಸ್ತ್ರೀಯರು ಹೊತ್ತಿಸಿದ ಅಗ್ನಿಕುಂಡದ ಮೂಲಕವೇ ಹುಕ್ಕಬುಕ್ಕರೆಂಬ ಜ್ಯೋತಿಗಳು ಹುಟ್ಟಿದುವು ಅವರು ವೀರಾವತಾರವನ್ನು ತಾಳಿ, ವಿಜಯ ನಗರದ ಸಿಂಹಾಸನವನ್ನು ಸ್ಥಾಪಿಸಿದರು



# ಭುಜಬಲಭೀಮನಾದ

# ಬುಕ್ಕಭೂಪತಿ

---

## (೧೩೪೩-೧೩೭೯)

ಮುಸಲ್ಮಾನರು ಉತ್ತರ ಹಿಂದುಸ್ಥಾನವನ್ನೆಲ್ಲ ಯವನಮಯವಾಗಿ ಮಾಡಿ ದಕ್ಷಿಣಾಕ್ಕೆ ಮೋರೆ ತಿರುಗಿದ ಕಾಲ ದೇವಗಿರಿ, ಒರಂಗಲ್ಲು, ದ್ವಾರಸಮುದ್ರ ಮನೆತನಗಳು ಮುಸಲ್ಮಾನರಿಗೆ ತುತ್ತಾದ ಕಾಲ ಕುಮಾರ ರಾಮನಾಥನು ಆನಗೊಂದಿಯ ಹತ್ತಿರ, ಮುಸಲ್ಮಾನರನ್ನು ಅನೇಕ ಸಲ ಹಿಮ್ಮೆಟ್ಟಿಸಿ ಕೊನೆಗೆ ಕುಮ್ಮಟದುರ್ಗದಲ್ಲಿ ಮುಸಲ್ಮಾನರಿಗೆ ಆಹುತಿಯಾದ ಕಾಲ ಆ ಕಾಲದಲ್ಲಿ ಮುಸಲ್ಮಾನರ ಕ್ರೂರಕೃತ್ಯಗಳ ಕಥೆಗಳನ್ನು ಕೇಳಿ, ಹಿಂದೂ ಜನರ ಹೃದಯಗಳು ತಲ್ಲಣಿಸಿದ್ದವು ಉತ್ತರ ಹಿಂದುಸ್ಥಾನದಲ್ಲಿ, ಯಾವ ಬಲಾಢ್ಯ ಅರಸನಿಂದಲೂ, ಮೇರವರಿದು ಬರುವ ಮುಸಲ್ಮಾನರ ಹಾವಳಿಯ ಭಯಂಕರ ಪ್ರವಾಹವನ್ನು ತಡೆಯುವುದು ಆಗಿದ್ದಿಲ್ಲ. ಅಲ್ಲದೆ, ಮುಸಲ್ಮಾನ ವೀರರು ದಕ್ಷಿಣ ಪಥದಲ್ಲಿಯೂ ಹೊಕ್ಕು, ಅನೇಕ ಮನೆತನಗಳನ್ನು ಲೀಲೆಯಿಂದ ಮುರಿದು ರಾಮೇಶ್ವರದವರಗೆ ಮೆರೆದಿದ್ದರು ಇವೆಲ್ಲ ಕಾರಣಗಳ ಮೂಲಕ, ದಕ್ಷಿಣಾದೇಶದ ಜನರ ಮನದಲ್ಲಿ ಒಂದು ಬಗೆಯ ಭೀತಿಯು ನೆಲೆಗೊಂಡಿತ್ತು ಆದರ, ಅವರ ವೀರತ್ವವು ಮಾತ್ರ ನಷ್ಟವಾಗಿದ್ದಿಲ್ಲ, ಸ್ವಾತಂತ್ರ್ಯಪ್ರೇಮವು ಅಚ್ಚಳಿಯದೆ ಉಳಿದಿತ್ತು, ಧರ್ಮಸಂಬಂಧವಾಗಿ ಪ್ರತಿಯೊಬ್ಬರ ಹೃದಯದಲ್ಲಿ ಭಕ್ತಿಭಾವವು ಉಕ್ಕುತ್ತಿತ್ತು ಆದಕಾರಣ ಪರಧರ್ಮೀಯರೂ ಪರಕೀಯರೂ ಆದ ಮುಸಲ್ಮಾನರನ್ನು ಹೇಗಾದರೂ ಮಾಡಿ, ಮುಂದಕ್ಕೆ ಬರಗೊಡ

ಬಾರದೆಂಬ ತೀಕ್ಷ್ಣವಾದ ಭಾವನೆಯು ಮಾತ್ರ ಪ್ರತಿಯೊಬ್ಬ ಹಿಂದುವಿನಲ್ಲಿ ಜಾಗ್ರತವಾಗಿತ್ತು ಆದರೆ ಪ್ರಯೋಜನವೇನು? ಅವರನ್ನಡ್ಡಗಟ್ಟುವ ಬಗೆ ಯಾವುದೆಂಬುದು ಯಾರಿಗೂ ತೋಚದೆ ಹೋಯಿತು ಇಂತಹ ಇರುಕಿನ ಸಂದರ್ಭದಲ್ಲಿ ಶ್ರೀ ವಿದ್ಯಾರಣ್ಯಸ್ವಾಮಿಗಳ ಪ್ರೇರಣೆಯಿಂದ ಹುಕ್ಕಬುಕ್ಕರೆಂಬಿಬ್ಬ ಅಣ್ಣತಮ್ಮಂದಿರು ವಿಜಯನಗರದ ರತ್ನಸಿಂಹಾಸನವನ್ನು ಸ್ಥಾಪಿಸಿ, ಭೋರ್ಗರೆದು ಬರುವ ಮುಸಲ್ಮಾನ ಸೇನಾ ಸಮುದ್ರಕ್ಕೆ ದೊಡ್ಡದೊಂದು ಅಣೆಕಟ್ಟನ್ನು ಕಟ್ಟಿ ಸುಮಾರು ೨೦೦-೨೫೦ ವರುಷಗಳವರಗೆ ಹಿಂದೂ ಧರ್ಮವನ್ನೂ ಹಿಂದೂ ಸಂಸ್ಕೃತಿಯನ್ನೂ ಹಿಂದೂ ರಾಜ್ಯವನ್ನೂ ಸಂರಕ್ಷಿಸಿದರು ಬುಕ್ಕನ ಅಣ್ಣನಾದ ಹರಿಯಪ್ಪ ಅಥವಾ ಹುಕ್ಕನು ಸಾಮ್ರಾಜ್ಯವನ್ನು ಸ್ಥಾಪಿಸಿ ಕೆಲವು ವರ್ಷಗಳಲ್ಲಿಯೇ ತೀರಿಕೊಂಡುದುದರಿಂದ ಸಾಮ್ರಾಜ್ಯವನ್ನು ಸಂವರ್ಧನಗೊಳಿಸುವ ಯಾವತ್ತು ಭಾರವು ಈ ಬುಕ್ಕಭೂಪತಿಯ ಮೇಲೆಯೇ ಬಿದ್ದಿತು ಆತನು ಆ ಪ್ರಕಾರವಾಗಿ ಸಾಮ್ರಾಜ್ಯವನ್ನು ಬೆಳಿಸಿ ೨೭ ವರ್ಷ ಪರಮ ಸಂಭ್ರಮದಿಂದ ರಾಜ್ಯವಾಳಿ ಮಡಿದನು.

ಭಾಷೆಗೆತಪ್ಪುವರಾಯರಗಂಡನೆಂಬ ಬಿರುದುಳ್ಳ ಈ ಬುಕ್ಕರಾಯನ ಮೊದಲನಯ ಮಹತ್ವದ ಕಾರ್ಯವೆಂದರ, ಅರ್ಥಾತ್, ವಿಜಯನಗರದ ಅರಸುಮನತನವನ್ನು ಸ್ಥಾಪಿಸಿದ್ದು ಕುಮ್ಮಟ ದುರ್ಗದಲ್ಲಾದ ಕಾಳೆಗದಲ್ಲಿ, ಕುಮಾರ ರಾಮನೂ ಆತನ ಸರ್ವಸೈನ್ಯವೂ ಶತ್ರುಗಳಿಗೆ ಆಹುತಿಯಾದುದೇನೋ ನಿಜ ಮುಸಲ್ಮಾನರು ಆ ಕಾಳಗದಲ್ಲಿ ಜಯ ಹೊಂದಿದರೂ ಅವರಿಂದ ಈ ದೇಶವನ್ನು ಅಂಕಿತದಲ್ಲಿಟ್ಟುಕೊಂಡು, ಆಳುವ ಕೆಲಸವು ಸುಲಭವಾಗಿ ನೀಗುವಂತಿರಲಿಲ್ಲ ಏಕೆಂದರೆ, ಆಗಿನ ಕಾಲದಲ್ಲಿ, ಜನತೆಯುಲ್ಲವೂ ಮುಸಲ್ಮಾನರಿಗೆ ವಿರುದ್ಧವಾಗಿತ್ತು ಜನತೆಯ ಇಚ್ಛೆಗೆ ವಿರುದ್ಧವಾಗಿ ಅದನ್ನು ಯಾವ ಅರಸನು ಆಳಲಾಪನು? ಆದುದರಿಂದ, ಹುಕ್ಕಬುಕ್ಕರು ವಿಜಯನಗರಮನೆತನವನ್ನು ಸ್ಥಾಪಿಸಿ ದೊಡನಯೆ, ಹಿಂದುಗಳೆಲ್ಲರೂ ಅವರ ಸುತ್ತಲು ನೆರದರು ಬುಕ್ಕನ ಅಣ್ಣನಾದ ಹುಕ್ಕನು ಏಳು ವರ್ಷ ಆಳಿ ಸತ್ತ ಕೂಡಲೆ ಬುಕ್ಕರಾಯನು

ಪಟ್ಟವೇರಿದನು ಆ ಸುಮಾರಕ್ಕೆ, ಪ್ರತಾಪರುದ್ರದೇವನ ಮಗನಾದ ಕೃಷ್ಣನು ಮುಸಲ್ಮಾನರ ಹಾವಳಿಯ ಸಲುವಾಗಿ ವಿಜಯನಗರಕ್ಕೆ ಓಡಿ ಬಂದನು ವಿಜಯನಗರವು ಹಿಂದೂಧರ್ಮ ಮತ್ತು ರಾಜ್ಯಗಳ ಸಂರಕ್ಷಕರ ಕೇಂದ್ರಸ್ಥಾನವಾಯಿತು ಹೊಯ್ಸಳ ಬಲ್ಲಾಳರೂ ಬುಕ್ಕನ ನೆರವಿಗೆ ಬಂದರು ಹಿಂದಕ್ಕೆ ಹಿಂದುಸ್ಥಾನದ ಇತಿಹಾಸದಲ್ಲಿ ಎಂದೆಂದೂ ಕಾಣದ ವಿಲಕ್ಷಣವಾದ ಒಕ್ಕಟ್ಟು ಆಗ ಅಲ್ಲಿ ಕಂಗೊಳಿಸುತ್ತಿತ್ತು ಹೀಗೆ, ಯಾವತ್ತು ಚಿಕ್ಕ ದೊಡ್ಡ ಹಿಂದೂ ಮನೆತನಗಳು ಒಂದಾಗಿ, ಕುಮ್ಮಟದುರ್ಗದ ಕಾಳಗದ ತರುವಾಯ ಸುಲ್ತಾನನಿಂದ ನೇಮಿಸಲ್ಪಟ್ಟ ಅಧಿನಾಯಕನನ್ನು ಓಡಿಸಿದರು ಮತ್ತು ದಕ್ಷಿಣದೇಶವನ್ನು ಪಾರತಂತ್ರ್ಯದಿಂದ ಮುಕ್ತಮಾಡಿದರು ಒಟ್ಟಿಗೆ, ಹಿಂದುಸ್ಥಾನವನ್ನು ಪರಕೀಯರಾದ ಮುಸಲ್ಮಾನರ ಮುಷ್ಟಿಯೊಳಗಿಂದ ಎಲ್ಲಕ್ಕೂ ಮೊದಲು ಪಾರುಮಾಡಿದ ಭೂಪನೆಂದರೆ ಬುಕ್ಕಭೂಪನು ಆದಕಾರಣ, ಕರ್ನಾಟಕವು ಮಾತ್ರವೇ ಅಲ್ಲ, ಸಕಲ ಹಿಂದುಸ್ಥಾನವು ಆತನಿಗೆ ಅತ್ಯಂತ ಋಣಿಯಾಗಿರುತ್ತದೆ ಈ ಪ್ರಕಾರವಾಗಿ, ಕೆಲವು ತಿಂಗಳುಗಳಲ್ಲಿಯೇ, ಬುಕ್ಕಭೂಪನು, ಮುಸಲ್ಮಾನರ ಅರಸನಾದ ಮುಹಮ್ಮದ್ ತಗಲಖನು ಗೆದ್ದುಕೊಂಡ ನಾಡೆಲ್ಲವನ್ನೂ ಕಸಿದುಕೊಂಡನು ದೌಲತ್ತಾಬಾದ್ ಅಥವಾ ದೇವಗಿರಿ ಒಂದು ಮಾತ್ರ ಮುಸಲ್ಮಾನರ ವಶದಲ್ಲಿ ಉಳಿಯಿತು

ಆದರೆ, ದಿಲ್ಲಿ ಸುಲ್ತಾನನ ಅರಸೊತ್ತಿಗೆ ದಕ್ಷಿಣದಲ್ಲಿ ಹೀಗೆ ಮಣ್ಣುಪಾಲಾಗಿ ಹೋದರೂ ಮುಸಲ್ಮಾನರು ಈ ಮುಂಚೆಯೇ ದಕ್ಷಿಣದಲ್ಲಿ ಬೇರುಬಿಟ್ಟು ನಿಂತಿದ್ದ ಕಾರಣ, ಅವರಲ್ಲಿ ಅಲ್ಲಾವುದ್ದೀನನೆಂಬವನು ಕಲಬುರ್ಗಿಯಲ್ಲಿ ೧೩೪೭ರಲ್ಲಿ ಬಾಮನೀ ರಾಜ್ಯವನ್ನು ಸ್ಥಾಪಿಸಿದ್ದರಿಂದ, ಕೃಷ್ಣಾ ತೀರದ ಕೆಳಗಿನ ಹಿಂದುಸ್ಥಾನವು ಮಾತ್ರ, ವಿಜಯನಗರದವರಿಗೆ ಅಧೀನವಾಗಿ ಉಳಿಯಿತು ಏಕೆಂದರೆ, ಕೃಷ್ಣೆಯ ಉತ್ತರ ಭಾಗವನ್ನು ಸಂರಕ್ಷಿಸುವುದು ಒರಂಗಲ್ಲ ಅರಸರ ಕರ್ತವ್ಯವಾಗಿತ್ತು ಆದರೆ, ಆ ಕಾರ್ಯವು ಅವರಿಂದ ಆಗಲಿಲ್ಲ ಬಾಮನಿ ರಾಜ್ಯದ ಅರಸನಾದ ಮಹಮ್ಮದನು ಒರಂಗಲ್ಲವನ್ನು ಸುಟ್ಟು ಬೂದಿಮಾಡಿ, ಅದರ ಅರಸನಾದ ವಿನಾಯಕ

ದೇವನನ್ನು ಬೆಂಕಿಯಲ್ಲಿ ಹಾರಿಸಿ ಸುಟ್ಟನು ! ಹಿಂದೂ ಜನರು ಅತನನ್ನು ಬೆನ್ನಟ್ಟಿ ಓಡಿಸಿದರೇನೋ ಸರಿ ಆದರೆ, ಅವರ ಜಯವು ಫಲಪ್ರದವಾಗ ಲಿಲ್ಲ ಹಿಂದೂಗಳ ಬೆನ್ನುಕಟ್ಟುವವರು ಅಲ್ಲಿ ಆಗ ಯಾರೂ ಇರಲಿಲ್ಲ. ಕೃಷ್ಣಾನದಿಯ ದಕ್ಷಿಣದಲ್ಲಿ ಮಾತ್ರ, ಬುಕ್ಕಭೂಪತಿಯು ಬಾಮನಿ ಅರ ಸರ ಆಟವನ್ನು ಸಾಗಗೊಡಲಿಲ್ಲ ಒರಂಗಲ್ಲ ರಾಜ್ಯವು ಹಾಳಾದೊಡ ನೆಯೆ, ಬಾಮನಿ ಅರಸರಿಗೂ ವಿಜಯನಗರದ ಅರಸರಿಗೂ ಯುದ್ಧವಾಗು ವುದು ಅಪರಿಹಾರ್ಯವಾಯಿತು

ಮಹಮ್ಮದಶಹನು ಒಂದು ದಿವಸ ಸಾರಾಯಿ ಕುಡಿದು ಕುಳಿತು ಕೊಂಡಾಗ, ತನ್ನ ದುರಿಗೆ ಗಾಯನವನ್ನು ಮಾಡಿದ ಸಂಗೀತಗಾರರಿಗೆ ವಿಜಯನಗರದ ಅರಸನು ತಾನು ಹೇಳಿದಷ್ಟು ಹಣವನ್ನು ಕೊಡಬೇ ಕೆಂದು ಆಜ್ಞೆ ಕೊಟ್ಟನು ಮಹಮ್ಮದನ ಮಂತ್ರಿಗಳು ಆತನು ಸಾರಾಯಿ ಯನ್ನು ಕುಡಿದ ಗುಂಗಿನಲ್ಲಿ ಈ ರೀತಿಯಾಗಿ ಅವಿವೇಕತನದ ಆಜ್ಞೆ ಯನ್ನು ಕೊಟ್ಟಿರಬಹುದೆಂದು ತಿಳಿದು, ಆ ಆಜ್ಞಾಪತ್ರವನ್ನು ಬುಕ್ಕ ರಾಯನ ಕಡೆಗೆ ಕಳುಹಲಿಲ್ಲ ಆದರೆ, ಮಹಮ್ಮದನು ಅದು ಕಳುಹಿಸಲ್ಪಡ ಲಿಕ್ಕೇಬೇಕೆಂದು ಹಟಹಿಡಿದನು ಆ ಮೇರೆಗೆ ದೂತರು ಆ ಆಜ್ಞಾಪತ್ರ ವನ್ನು ತೆಗೆದುಕೊಂಡು, ಬುಕ್ಕನ ಕಡೆಗೆ ಬಂದರು ಸ್ವಾತಂತ್ರ್ಯಾಭಿಮಾನಿ ಯಾದ ಬುಕ್ಕನು ಆ ವಿಲಕ್ಷಣವಾದ ಆಜ್ಞಾಪತ್ರವನ್ನೋದಿ ನಕ್ಕು ಅದನ್ನು ಹರಿದುಹಾಕಿ, ಅದನ್ನು ತಂದ ದೂತರನ್ನು ಕತ್ತೆಯಮೇಲೆ ಕುಳ್ಳಿರಿಸಿ ಮೆರಿಸಿ ಮರಳಿ ಮಹಮ್ಮದನೆಡೆಗೆ ಅಟ್ಟಿಕೊಟ್ಟನು, ಮತ್ತು ದೊಡ್ಡ ದೊಂದು ಸೈನ್ಯವನ್ನು ಕಳೆಹಾಕಿ, ಬಾಮನಿ ರಾಜ್ಯದೊಳಗಿನ ಪ್ರದೇಶ ಗಳನ್ನು ಕೊಳ್ಳೆ ಹೊಡೆವುದಕ್ಕೆ ಪ್ರಾರಂಭಿಸಿದನು ಕೃಷ್ಣಾ ತುಂಗಭದ್ರಾ ನದಿಗಳ ನಡುವಿರುವ ಪ್ರದೇಶವು ಯಾವಾಗಲೂ ಅನೇಕ ಅರಸರ ನಡು ವಿನ ವಾದಭೂಮಿಯಾಗಿದೆ ವಿಜಯನಗರ ರಾಜ್ಯವು ಸ್ಥಾಪನವಾದ ಬಳಿಕ ಕೂಡ ಎರಡು ಶತಮಾನಗಳವರಗೆ, ವಿಜಯನಗರದ ಅರಸರಿಗೂ ಬಾಮನಿ ಅರಸರಿಗೂ ಆದ ದೊಡ್ಡ ದೊಡ್ಡ ಕಾಳೆಗಗಳಿಗೆಲ್ಲ ಈ ವಾದ ಭೂಮಿಯೇ ಕಾರಣವಾಗಿದೆ. ಇರಲಿ, ಅರಿರಾಯವಿಭಾಡನಾದ ಬುಕ್ಕ

ಭೂಪತಿಯು ತನ್ನ ಪ್ರಬಲವಾದ ಸೈನ್ಯದೊಂದಿಗೆ ಬಂದು ಮುದಗಲ್ಲಿನ ಭದ್ರವಾದ ಕೋಟೆಯನ್ನು ಮುತ್ತಿದನು ಅಲ್ಲಿ, ಮುಸಲ್ಮಾನರಿಗೂ ಹಿಂದುಗಳಿಗೂ ರೌದ್ರವಾದ ಸಂಗ್ರಾಮವೆಸಗಿತು ಆಗ ಎಸಗಿದ ಸುರಿಗೆ ಕಾಳಗದಲ್ಲಿ, ಬುಕ್ಕಭೂಪನು ತನ್ನ ಭುಜಾವಷ್ಟಂಬದಿಂದ ಇದಿರಿಸುವ ವೀರರನ್ನು ಮುರಿದು, ತುಳಿದು, ತಿವಿದು, ಇರಿದು, ಕೊಂದು ತನ್ನ ವೀರ ವನ್ನು ಮೆರೆಯಿಸಿದನು ಆತನ ಸೈನಿಕರೂ ತಮಗೆ ತಾಗಿ ತಡೆವರನ್ನು ಇರಿದು ಮೆರೆದು ಕಾದಿ ತಮ್ಮ ಪೈಗಲಿತನವನ್ನು ತೋರ್ಪಡಿಸಿದರು ಮುಸಲ್ಮಾನರೂ ಬಹಳ ಉಬ್ಬಿನಿಂದ ಕಾದಿದರು ಶತ್ರುಗಳು ಬಳಕು ವಂತೆ, ತಮ್ಮ ಕರಾಳಾಸಿಯ ಉಗ್ರಪ್ರತಾಪವನ್ನು ತೋರಿಸಿದರು ಆದರೆ, ಅವರ ಶೌರ್ಯಶಕ್ತಿಯೆಲ್ಲವೂ ಕೊನಗೆ ವ್ಯರ್ಥವಾಯಿತು ಆ ಭಯಂಕರ ಯುದ್ಧದಲ್ಲಿ, ಬುಕ್ಕಭೂಪನು ಮಾಡಿದ ಹಾವಳಿಯನ್ನು ವರ್ಣಿ ಸಲಸದಳವಲ್ಲ ಶತ್ರುಸೈನ್ಯವೆಲ್ಲವೂ ಪೂರಾ ನುಚ್ಚುನುರಿಯಾಗಿ ಹೋ ಯಿತು ಆ ಸೈನ್ಯದಲ್ಲಿ ಒಬ್ಬನೇ ಒಬ್ಬನು ಮಾತ್ರವೇ ಪಾರಾಗಿ, ಕಲ ಬುರ್ಗೆಗೆ ಓಡಿಹೋಗಿ, ಆ ಭಯಂಕರವಾದ ರಣಕಂದನದ ಸುದ್ದಿಯನ್ನು ಸುಲ್ತಾನನಿಗೆ ತಲುಪಿಸಿದನು ಆಗ, ಸುಲ್ತಾನನು ಅತ್ಯಂತ ಕೋಪ ಗೊಂಡು, ಅಪರಿಮಿತ ಸೇನಾಸಮೇತವಾಗಿ ಸ್ವತಃ ತಾನೇ ಬಂದು, ಬುಕ್ಕನ ಸೈನ್ಯವನ್ನು ಆದವಾನಿಯವರಗೆ ಅಟ್ಟಿದನು ಆತನು ಅನೇಕ ಹಿಂದೂ ಗಳನ್ನು ತರಿದು ಸೀಳಿ ಮುದಗಲ್ಲಿನಲ್ಲಾದ ಭಯಂಕರ ಕೊಲೆಯ ಸೇಡನ್ನು ಚೆನ್ನಾಗಿ ತೀರಿಸಿಕೊಂಡನು ಆದರ ಬುಕ್ಕನ ಸೈನ್ಯವು ಅದಕ್ಕೂ ಹಿಂಜ ರಿಯಲಿಲ್ಲ ಕವತಾಳ ಎಂಬ ಊರಿನ ಹತ್ತಿರ, ವೀರಬುಕ್ಕನ ಸೇನೆಯು ಮುಸಲ್ಮಾನರ ಸೈನ್ಯಕ್ಕೆ ಇದಿರಾಗಿ ಸೆಣಸಿ ಕಾದಿತು ಮುಸಲ್ಮಾನರು ದಿಕ್ಕಾಪಾಲಾಗಿ ಓಡಹೋಗಲಾರಂಭಿಸಿದರು ಆದರ, ಅಷ್ಟರಲ್ಲಿ, ಅಕಸ್ಮಿಕ ವಾಗಿ ಮದೋನ್ಮತ್ತವಾದ ಒಂದು ಆನೆಯು ಬುಕ್ಕನ ಸೈನ್ಯವನ್ನು ಹೊಕ್ಕು ಹಾವಳಿಯನ್ನು ಮಾಡಿದುದರಿಂದ, ಬುಕ್ಕನ ಸೈನ್ಯವು ಹಿಂದಕ್ಕೆ ಸರಿಯಿತು ಹಿಂದಿನ ಕಾಲದಲ್ಲಿ, ಆನೆ ಕಾಳಗದಲ್ಲಿ, ಆನೆಯ ಮದವು ಅನೇಕ ಸಲ ಭಯಂಕರವಾದ ಅಪಘಾತಗಳನ್ನುಂಟುಮಾಡಿದೆ ತಾಳೀಕೋಟೆಯ ಲ್ಲಿಯೂ ಆನೆಯ ಮದವೇ ವಿಜಯನಗರದ ಪಟ್ಟವನ್ನು ಹಾರಿಸುವುದಕ್ಕೆ

ಕಾರಣವಾಯಿತು ಇರಲಿ ಬುಕ್ಕನ ಸೈನ್ಯವು ಹೀಗೆ ಹಿಂದಕ್ಕೆ ಸರಿದ ಸಂಧಿಯನ್ನು ಸಾಧಿಸಿ, ಮಹಮ್ಮದ್‍ಶಹನು ವಿಜಯನಗರವನ್ನು ಸುತ್ತಿ ಒಂದು ತಿಂಗಳದವರೆಗೆ ಅದನ್ನು ಮುತ್ತಿದನು ಆದರ, ವಿಜಯನಗರವು ಅತ್ಯಂತ ಭವ್ಯವಾದ ಮತ್ತು ಬಲವಾದ ಕೋಟೆಯು ಅದು ಮಹಮ್ಮದನ ಒಡಿಸೈನ್ಯಕ್ಕೆ ಜಗ್ಗುವುದೇ? ಕೊನೆಗೆ, ಮಹಮ್ಮದ್‍ಶಹನು ಆ ಕೋಟೆಯನ್ನು ತಗೆದುಕೊಳ್ಳುವುದು ಅಸಾಧ್ಯವಾದ ಕಾರ್ಯವೆಂದು ತಿಳಿದು, ಬಂದ ಹಾದಿಯಿಂದ ತಿರುಗಿ ತನ್ನ ರಾಜ್ಯಕ್ಕೆ ಹೊರಟುಹೋದನು ಆಗಿನ ಹಿಂದೂ ಜನತೆಯು ಈಗಿನಂತೆ ನಿರ್ಜೀವವಾಗಿರಲಿಲ್ಲ ಆದಕಾರಣ, ಮಹಮ್ಮದ್‍ಶಹನು ವಿಜಯನಗರದಿಂದ ಮರಳಿ ತನ್ನ ರಾಜ್ಯಕ್ಕೆ ಹೋಗುವಾಗ, ಆತನಿಗೆ ಹಿಂದೂಗಳು ಪರಿಪರಿಯಿಂದ ತೊಂದರಕೊಟ್ಟರು ಮತ್ತು ಆತನನ್ನು ಬನ್ನಟ್ಟಿ ಕಿರುದೊರೆಯುವರಗೆ ಎಂದರ ತುಂಗಭದ್ರಾ ನದಿಯವರೆಗೆ ಆತನನ್ನು ಓಡಿಸಿದರು ಅಲ್ಲಿ, ಬುಕ್ಕನಿಗೂ ಮಹಮ್ಮದ್‍ಶಹನಿಗೂ ಪುನಃ ಸಂಗ್ರಾಮವಾಯಿತು ಅದರ, ಕೊನಗೆ ಅವರಿಬ್ಬರಲ್ಲಿ ಒಪ್ಪಂದವಾಯಿತು

ಈ ರೀತಿಯಾಗಿ ಬುಕ್ಕರಾಯನಿಗೂ ಮಹಮ್ಮದ್‍ಶಹನಿಗೂ ಆದ ಅನೇಕ ಕಾಳಗಗಳಿಂದ ಒಂದು ಮಾತು ಅವರಿಬ್ಬರ ನಿದರ್ಶನಕ್ಕೆ ಬಂದಿತು. ಅದಾವುದಂದರೆ, ವಿಜಯನಗರದವರನ್ನು ನಿರ್ಮೂಲಮಾಡುವುದು ತೀರ ಅಸಾಧ್ಯವಾದುದೆಂಬುದನ್ನು ಮುಸಲ್ಮಾನರು ಮನಗಂಡರು ಅದೇ ಮೇರೆಗೆ, ಮುಸಲ್ಮಾನರು ಬಹಳ ದಿವಸಗಳಿಂದ ದಕ್ಷಿಣದಲ್ಲಿ ಬೇರೂರಿ ನಿಂತಿದುದರಿಂದ, ಅವರೊಡನೆ ಆದಷ್ಟು ಮಟ್ಟಿಗೆ ಸ್ನೇಹ ಭಾವದಿಂದಲೇ ಇರಬೇಕೆಂದು ಬುಕ್ಕನಿಗೆ ತೋರಿತು ಆದಕಾರಣ, ಅವರಿಬ್ಬರೂ ಕೊನೆಯವರೆಗೆ ಸ್ನೇಹಭಾವದಿಂದಲೇ ಇದ್ದರು ಆದರೆ, ಮುಂದ ತೀವ್ರವೇ ಮಹಮ್ಮದಶಹನು ಮರಣ ಹೊಂದಿದನು. ಆತನ ಮಗನಾದ ಮುಜಾಹಿದಶಹನು ಬಾಮನೀ ರಾಜ್ಯಕ್ಕೆ ಅರಸನಾದನು ಮುಜಾಹಿದನು ಬಹಳ ಶೂರನಾದರೂ ಅತ್ಯಂತ ಸೊಕ್ಕಿನವನು ತನ್ನ ವೀರಾಡಂಬರವನ್ನು ತೋರಿ

ಸುವುದಕ್ಕೆ ಆತನು ಹಾತೊರೆದನು ಪಟ್ಟವೇರುವುದೊಂದೇ ತಡ, ಕೂಡಲೆ, ಆತನು ಬುಕ್ಕರಾಯನಿಗೆ ಪತ್ರ ಬರೆದು ಕೃಷ್ಣಾ ತುಂಗಭದ್ರಾ ನದಿಗಳ ನಡುವಿನ ಭೂಮಿಯು ಬಾಮನಿ ರಾಜ್ಯದ ಒಡೆತನಕ್ಕೆ ಒಳಗಾದುದೆಂದೂ ಅದನ್ನು ಬುಕ್ಕರಾಯನು ಬಿಟ್ಟುಕೊಡಬೇಕೆಂದೂ ತಿಳುಹಿದನು ಆದರೆ, ಇಂತಹ ಪೊಳ್ಳು ಬೆದರಿಕೆಗೆ ಬುಕ್ಕನು ಬಗ್ಗುವನೇ ? ಕೃಷ್ಣಾ ತುಂಗಭದ್ರಾ ನದಿಗಳ ನಡುವಿನ ಭೂಮಿಯು ಆನೆಗೊಂದಿಯವರ ಕಾಲದಿಂದಲೂ ಹಿಂದೂಗಳ ಒಡೆತನಕ್ಕೆ ಒಳಪಟ್ಟ ಭೂಮಿಯಾಗಿರುವುದರಿಂದ, ಅದರ ಮೇಲೆ ಮುಸಲ್ಮಾನರ ಹಕ್ಕು ಲವಲೇಶವಾದರೂ ಇಲ್ಲವೆಂಮೂ ತನ್ನ ವಶದಲ್ಲಿದ್ದ ಆ ಭೂಮಿಯನ್ನು ತಾನು ಸರ್ವಥಾ ಬಿಟ್ಟುಕೊಡಲಾರೆನೆಂದೂ ವೀರಬುಕ್ಕರಾಯನು ಆತನಿಗೆ ನಿರ್ದಾಕ್ಷಿಣ್ಯದಿಂದ ಅರುಹಿದನು ಸ್ವಾಭಿಮಾನದ ಈ ಉತ್ತರವನ್ನು ನೋಡಿ, ಮುಜಾಹಿದನು ನಿರುಪಾಯನಾಗಿ ಯುದ್ಧವನ್ನು ಸಾರಿದನು ಮತ್ತೆ ಮಹಾ ಆಹವಕ್ಕೆ ಮೊದಲಾಯಿತು ಬುಕ್ಕಭೂಪತಿಯು ರಿಪುಗಳ ಸೈನ್ಯವನ್ನು ತರಿದಟ್ಟಿ, ತನ್ನ ಕೀರ್ತಿಯನ್ನು ಬಳಿಸಿದನು ಅರಿನೃಪಾಲರೆಂಬ ವೃಷಭಗಳು ಗರಗರನೆ ತಿರುಗುತ್ತಿರಲು, ಅವರ ಸೇನಾಸಮೂಹವೆಂಬ ಚಕ್ರವು ಹೊರಳುತ್ತಿರಲು, ಬುಕ್ಕಭೂಪತಿಯು ತನ್ನ ಉಗ್ರಾಸಿಯಿಂದ ಉಚ್ಚಳಿಸಿ ಧರೆಗುರುಳಿಸುವ ದ್ವೇಷಿಗಳ ಶಿರಗಳು ಕೊಡಗಳಾಗಲು, ಈ ಹೊಸ ತರಹದ ಯಾತದಿಂದ, ಯುದ್ಧ ರಂಗವಾಪಿಯಿಂದ ವೈರಿಗಳ ಕೆನ್ನೀರನ್ನು ಆತನು ತನ್ನ ಯಶೋವಲ್ಲರಿಗ ಎತ್ತಿಹಾಕಿ ಅದನ್ನು ಸಂವರ್ಧನಗೊಳಿಸಿದನು ಮುಸಲ್ಮಾನರಿಗೂ ಹಿಂದೂಗಳಿಗೂ ಆದ ಈ ಭಯಂಕರ ಯುದ್ಧದಲ್ಲಿ, ಹಿಂದೂಗಳು ಬಹಳ ಶೌರ್ಯದಿಂದ ಕಾದಿದರು ಯುದ್ಧವು ನಡೆದಾಗ, ಒಬ್ಬ ಶೂರ ಹಿಂದುವು ಸುಲ್ತಾನನ ತಲೆಗೆ ಗುರಿಯನ್ನಿಟ್ಟು ಅಂಬನ್ನೆಸದನು ದೈವವಶಾತ್, ಸುಲ್ತಾನನ ಮುಕುಟವು ಅಡ್ಡ ಬಂದು ಆತನ ಜೀವವನ್ನು ಉಳಿಸಿತು ವಿಜಯನಗರದ ಸೈನ್ಯದ ಆಟೋಪಕ್ಕೆ ಬಲವದರಾತಿಸೇನೆಯು ಕಂಗೆಟ್ಟಿತು, ಅವರ ಹಸ್ತಿಸಂಕುಳವು ಅಳ್ಳಿ ಬಳ್ಳಿತು ಸುಲ್ತಾನನು ಓಡಿಹೋದನು ಹಾದಿಯಲ್ಲಿ, ಆತನು ಆದವಾನಿಯ ಕೋಟೆಯನ್ನು ಮುತ್ತಿದನು ಒಂಭತ್ತು ತಿಂಗಳವರೆಗೆ, ಅಲ್ಲಿ ಆತನು ಮುಸಗಿ ಮುಳಿದು ಮೇಲೆತ್ತಿ ಕಾದಿದರೂ,

ಆ ಕೋಟೆಯು ಆತನ ಕೈವಶವಾಗಲಿಲ್ಲ ಆಗ, ಮುಜಾಹಿದನು ಹಿಂದೂಗಳನ್ನು ತಡಹುವುದನ್ನು ಬಿಟ್ಟುಕೊಟ್ಟು ತನ್ನ ರಾಜ್ಯವನ್ನು ಸೇರಿದನು.

ಆಗ, ಬಾಮನಿ ರಾಜ್ಯದಲ್ಲಿ ಶಾಂತತೆಯಿರಲಿಲ್ಲ ಮುಜಾಹಿದನ ಚಿಗಪ್ಪನ ಮಗನಾದ ದಾವುದಖಾನನೆಂಬವನು ಮುಜಾಹಿದಖಾನನ ಡೇರೆಯನ್ನು ತಾನೊಬ್ಬನೇ ಹೊಕ್ಕು, ಆತನನ್ನು ಇರಿದು ಕೊಂದು ಪಟ್ಟವೇರಿದನು ಬಾಮನೀ ರಾಜ್ಯದಲ್ಲಿ ಆಗ ಇಬ್ಬಣಗಳುಂಟಾದುವು ಮುಜಾಹಿದನ ಬಣದವರು ದಾವುದಖಾನನ ಅರಸೊತ್ತಿಗೆಯನ್ನು ಒಪ್ಪದೆ, ರಾಜ್ಯದಲ್ಲಿ ಬಂಡಾಯಿಗಳನ್ನೆಬ್ಬಿಸಿದರು ಹೀಗೆ, ಮುಸಲ್ಮಾನರ ಸ್ಥಿತಿಯು ಆಗ ಬಹಳ ನಿಕೃಷ್ಟವಾಗಿತ್ತು ಇತ್ತ, ಬುಕ್ಕಭೂಪತಿಯು ತನ್ನ ರಾಜ್ಯದಲ್ಲಿ ಮುಸಲ್ಮಾನರ ಆಟವನ್ನು ಏನೂ ಸಾಗಗೊಡಲಿಲ್ಲ. ಆಗ, ಆತನು, ದಕ್ಷಿಣದಲ್ಲಿ ಅನೇಕ ಹೊಸ ರಾಜ್ಯಗಳನ್ನು ಗೆದ್ದು ತನ್ನ ರಾಜ್ಯವನ್ನು ವಿಸ್ತಾರಗೊಳಿಸಿ ಬಹು ವಿಭವದಿಂದ ರಾಜ್ಯವಾಳಿದನು ಈ ನೃಪೇಂದ್ರನ ಅರಮನೆಯಲ್ಲಿ ಆಳವಳಿದ ಅರಾತಿಭೂಪತಿಗಳ ಬಳಗವು ಕಾಣಿಕೆಯಾಗಿ ತಂದುಕೊಡುವ ಗಜಗಳ ಮದಧಾರಾಜಲದ ಮತ್ತು ಕುದುರೆಗಳ ಲಾಲಾಜಲದ ಪ್ರವಾಹವು ಅನವರತವಾಗಿ ಹರಿಯುತ್ತಿತ್ತು ಆತನು, ದಟ್ಟವಾಗಿ ಹೆಣೆದಿರುವ ವೈರಿಗಳೆಂಬ ಬಿದುರುಮಳೆಗಳನ್ನು ತರಿದು, ಭೂಭೃದ್ವರ್ಗವನ್ನು ನುಗ್ಗಿ, ತತ್‌ಕ್ಷಣದಲ್ಲಿ ಕಂಟಕಕೋಟಿಯನ್ನು ಕಡಿದು, ಸಮುದ್ರವಲಯಾಂಕಿತವಾದ ಧಾರುಣಿಯನ್ನು ತನ್ನ ದೋರ್ಬಲದಿಂದ ಸೇರ್ಪಡಿಸಿ, ಕೀರ್ತಿಶ್ರೀಗೆ ಅದನ್ನು ಕೇಳೀಗೃಹಾಂಗಣವನ್ನಾಗಿ ಮಾಡಿದನು

ಭೀಮಪರಾಕ್ರಮನಾದ ಬುಕ್ಕರಾಯನು, ಈ ರೀತಿಯಾಗಿ ತನ್ನ ಸ್ವಂತಪರಾಕ್ರಮದಿಂದ, ವಿಜಯನಗರದ ರಾಜ್ಯವನ್ನು ವೃದ್ಧಿಗೊಳಿಸಿ, ಒತ್ತೊತ್ತಿ ಬರುವ ಮುಸಲ್ಮಾನರನ್ನು ಮುಂದಕ್ಕೆ ಬರಗೊಡದೆ, ತಡೆದು ಹಿಡಿದು, ಅವರ ಬಿಂಕವನ್ನು ಬಯಲುಮಾಡಿ, ವೈರಿಕುಲಕಾಲದಂಡನಾಗಿ ಅಟ್ಟಹಾಸದಿಂದ ಆಳಿದನು ದಕ್ಷಿಣದಲ್ಲಿ, ಯಾವತ್ತು ಹಿಂದೂ ಅರಸರು ಆತನ ಚಕ್ರವರ್ತಿತ್ವವನ್ನು ಒಪ್ಪಿಕೊಂಡರು ಜಯಜಯಧ್ವನಿಯು ದಶ

ದಿಕ್ಕುಗಳಲ್ಲಿ ಘೂರ್ಣಿಸಿತು ಮಲಬಾರ ಸಿಂಹಲ ದ್ವೀಪಗಳ ರಾಯರುಗಳು ಬುಕ್ಕಭೂಪನ ನೆಲೆವೀಡಾದ ವಿಜಯನಗರದಲ್ಲಿ ತಮ್ಮ ರಾಯಭಾರಿಗಳನ್ನಿಟ್ಟಿದ್ದರು ಹೀಗೆ, ಬುಕ್ಕರಾಯನು ಹಿಂದೂಗಳ ರಾಜ್ಯವನ್ನೂ ಸಂಸ್ಕೃತಿಯನ್ನೂ ಸಾಯುವವರೆಗೆ ಪರಿಪಾಲಿಸಿ ಆ ಬಲಾಢ್ಯರಾದ ಸಾಮ್ರಾಜ್ಯವನ್ನು ತನ್ನ ಮಗನಿಗೆ ಒಪ್ಪಿಸಿ ಸುಖವಾಗಿ ಮರಣಹೊಂದಿದನು



### ಆಹವಧೀರನಾದ

# ದೇವರಾಯ

---

## (೧೪೧೯-೧೪೪೪)

ವಿಜಯನಗರದ ಸಾಮ್ರಾಜ್ಯವು ಸ್ಥಾಪಿತವಾಗಿ ೬೦-೭೦ ವರುಷಗಳಾಗಿದ್ದುವು  ಬುಕ್ಕರಾಯನೊಬ್ಬನೇ ಮುವತ್ತೇಳು ವರ್ಷ ಪ್ರತಾಪದಿಂದ ರಾಜ್ಯವಾಳಿ, ವಿಜಯನಗರದ ಸಾಮ್ರಾಜ್ಯವನ್ನು ಪೂರ್ವ ಪಶ್ಚಿಮ ದಕ್ಷಿಣ ಸಮುದ್ರಗಳವರೆಗೆ ಹಬ್ಬಿಸಿ, ಅರಿರಾಯ ವಿಭಾಡನೆಂದೂ ಭಾಷೆಗೆ ತಪ್ಪುವ ರಾಯರ ಗಂಡನೆಂದೂ ಹೆಸರುವಾಸಿಯಾಗಿದ್ದನು  ಆತನ ತರುವಾಯ ಆಳಿದ ಎರಡನೆಯ ಹರಿಹರರಾಯನ ಸುಮಾರು ೨೦ ವರ್ಷದ ಆಳಿಕೆಯಲ್ಲಿ ರಾಜ್ಯದಲ್ಲಿ ಶಾಂತತೆಯು ನೆಲಗೊಂಡಿತ್ತು  ಆತನ ತರುವಾಯ ಆಳಿದ ಇಬ್ಬರು ಮೂವರು ಅರಸರ ಕಾಲದಲ್ಲಿ ವಿಜಯನಗರಕ್ಕೆ ಮುಸಲ್ಮಾನರ ಪೆಟ್ಟು ತಗಲಿತು  ಆ ಸುಮಾರಕ್ಕೆ ಈ ಎರಡನೆಯ ದೇವರಾಯನು ವಿಜಯನಗರದ ರತ್ನಸಿಂಹಾಸನವನ್ನೇರಿದನು  ಈತನ ಇಪ್ಪತ್ತೈದು ವರುಷಗಳ ಆಳಿಕೆಯಲ್ಲಿ ಹಿಂದೂಗಳಿಗೂ ಮುಸಲ್ಮಾನರಿಗೂ ಎಡೆಬಿಡದೆ ಕಾಳಗಗಳು ನಡೆದವು  ಆದರೆ, ಒಟ್ಟಿನ ಮೇಲೆ ವಿಜಯನಗರದ ವೈಭವವು ಹೆಚ್ಚುತ್ತಲೇ ಇತ್ತು  ಈ ದೇವರಾಯನ ಆಳಿಕೆಯು ಹೀಗೆ ಯುದ್ಧಗಳಿಂದ ತುಂಬಿರುವುದಲ್ಲದೆ, ಅನೇಕ ಮನೋರಂಜಕವಾದ ಸಂಗತಿಗಳಿಂದಲೂ ತುಂಬಿದೆ  ಈ ಅವಧಿಯಲ್ಲಿ ಪ್ರತಾಪಿಯಾದ ದೇವರಾಯನು ಜೀವದ ಮೇಲಿನ ಅನೇಕ ಗಂಡಾಂತರಗಳಿಂದ ಪಾರಾದನು  ಹಾಗೆಯೇ ಮುಸಲ್ಮಾನ ಅರಸರೂ ಸರದಾರರೂ ಕೂಡ ಜೀವದ ಮೇಲಿನ ಕುತ್ತುಗಳಿಂದ ಬದುಕಿದರು

ಬಾಮನೀರಾಜ್ಯದಲ್ಲಿ ಈ ಅವಧಿಯಲ್ಲಿ ವಿಲಕ್ಷಣವಾದ ಕೊಲೆ ಸುಲಿಗೆಗಳು ನಡೆದಿದ್ದವು ವೀರಬುಕ್ಕಭೂಪತಿಯು ಸಾಯುವ ನಾಲ್ಕಾರು ವರ್ಷ ಮುಂಚೆ ಎಂದರೆ ೧೩೭೫ ರಲ್ಲಿ ಈ ಕೊಲೆ ಸುಲಿಗೆಗಳಿಗೆ ಪ್ರಾರಂಭವಾಯಿತು ಮುಜಾಹಿದನ ಚಿಗಪ್ಪನಾದ ದಾವುದನು ಒಂದು ರಾತ್ರಿ ಮುಜಾಹಿದನ ಡೇರೆಯನ್ನು ಹೊಕ್ಕು ಕತ್ತಿಯಿಂದ ಆತನನ್ನು ಇರಿದು ಕೊಂದು ತಾನು ಕಲಬುರ್ಗೆಯ ಸುಲ್ತಾನನಾದನು ಆದರೆ ಸ್ವಲ್ಪ ದಿವಸಗಳಲ್ಲಿ ಆತನು ಮಸೀದಿಯಲ್ಲಿ ನಿಮಾಜು ಮಾಡುತ್ತಿರುವಾಗ ಮುಜಾಹಿದನ ಪಕ್ಷದವನೊಬ್ಬನಿಂದ ಕೊಲ್ಲಲ್ಪಟ್ಟನು ಮತ್ತು ಮುಜಾಹಿದನ ತಂಗಿಯು ದಾವುದನ ಮಗನ ಕಣ್ಣುಗಳನ್ನು ಕೀಳಿಸಿದಳು ಆಗ ಮಹಮ್ಮೂದನೆಂಬವನು ಬಾಮನೀರಾಜ್ಯಕ್ಕೆ ಸುಲ್ತಾನನಾದನು ಆತನ ೨೦ ವರುಷಗಳ ಆಳಿಕೆಯೆಂದರ ಬಹುಶಃ ವಿಜಯನಗರದ ೨ ನಯ ಹರಿಹರರಾಯನ ಆಳಿಕೆಗೆ ಸಮವಾದುದು ಇವರಿಬ್ಬರ ಅರಸೊತ್ತಿಗೆಯಲ್ಲಿ ಇವೆರಡೂ ರಾಜ್ಯಗಳಲ್ಲಿ ಚೆನ್ನಾಗಿ ಶಾಂತತೆಯು ನಲಗೊಂಡಿತ್ತು ಅವರಿಬ್ಬರು ತೀರಿದೊಡನ ಅವೆರಡೂ ರಾಜ್ಯಗಳಲ್ಲಿ ಪುನಃ ಗೊಂದಲವು ಪ್ರಾರಂಭವಾಯಿತು ವಿಶೇಷತಃ ಬಾಮನಿರಾಜ್ಯವು ಮತ್ತೆ ಕೊಲೆಗಳ ಆಗರವಾಯಿತು ಮಹಮ್ಮೂದನ ತರುವಾಯ ಆತನ ಮಗನಾದ ಗ್ಯಾಸುದ್ದೀನನೆಂಬ ಹದಿನೇಳು ವರುಷದ ಹುಡುಗನು ಪಟ್ಟವೇರಿದನು ಆದರೆ, ಒಬ್ಬ ಗುಲಾಮನು ಮೋಸದಿಂದ ಆತನ ಕಣ್ಣುಗಳನ್ನು ಕಳೆದುಬಿಟ್ಟನು ಆಗ ಆತನ ತಮ್ಮನಾದ ಶ್ಯಾಮುಸುದ್ದೀನನಂಬುವನು ಸುಲ್ತಾನನಾದನು ಆದರೆ, ಆತನ ಚಿಗಪ್ಪನ ಮಗನಾದ ಫಿರೂಝುನೆಂಬವನು ಶ್ಯಾಮುಸುದ್ದೀನನ ಕಣ್ಣುಗಳನ್ನು ಕೀಳಿಸಿ ತಾನು ಕಲಬುರ್ಗೆಯಲ್ಲಿ ಸುಲ್ತಾನನಾದನು ಫಿರೂಝುನು ಪಟ್ಟಕ್ಕೆ ಬಂದಾಗ ವಿಜಯನಗರದ ಅರಸರು ದುರ್ಬಲರಿದ್ದುದರಿಂದ, ಆತನ ಕಾಲದಲ್ಲಿ ಬಾಮನಿರಾಜ್ಯವು ಪ್ರಬಲವಾಯಿತು ವಿಜಯನಗರವು ಬಲಗುಂದಿತು

ಆದರೆ ಈ ಪ್ರತಾಪ ದೇವರಾಯನು ೧೪೧೯ ರಲ್ಲಿ ಪಟ್ಟವೇರಿದೊಡನೆ ಪುನಃ ಯುದ್ಧಕ್ಕೆ ಕಳೆಕಟ್ಟಿತು ಇನ್ನೂ ಫಿರೂಝುನು ಆಗ ಜೀವದಿಂದಿದ್ದನು ದೇವರಾಯನು ಪಟ್ಟವೇರಿದ್ದೊಂದೇ ತಡ, ಮುಸಲ್ಮಾನರೊಡನೆ

ಯುದ್ಧಮಾಡುವ ಸಿದ್ಧತೆಯನ್ನು ಮಾಡತೊಡಗಿದನು. ಏಕೆಂದರೆ, ಫಿರೂಝನು ಕಾಲು ಕೆದರಿ ಜಗಳ ತೆಗೆವುದರಲ್ಲಿ ನಿಪುಣನು. ಆತನು ವರಂಗಲ್ಲ ಪಾನಂಗಲ್ಲ ಕೋಟೆಗಳನ್ನು ಕೈವಶಮಾಡಿಕೊಳ್ಳಲಿಕ್ಕೆ ಪ್ರಯತ್ನ ಮಾಡಿದನು ಈ ಪ್ರಯತ್ನಗಳು ವಿಫಲವಾದವು. ಅಷ್ಟರಲ್ಲಿ ದೇವರಾಯನು ಮಹಾಸೈನ್ಯದೊಂದಿಗೆ ಯುದ್ಧಕ್ಕೆ ಹೊರಟನು. ಆತನು ಆಗ ಇನ್ನೂ ಚಿಕ್ಕವನು. ಆದರೂ ಮುಸಲ್ಮಾನರ ವಿಷಯವಾಗಿ ಆತನ ಮನದಲ್ಲಿ ದ್ವೇಷವು ಕಳಕಳನೆ ಕುದಿಯುತ್ತಿತ್ತು. ಮುಸಲ್ಮಾನರ ಅನನ್ವಿತ ಕೃತ್ಯಗಳಿಗೆ ಹಿಂದೂಗಳು ಬೇಸರಗೊಂಡಿದ್ದರು. ಆದಕಾರಣ, ಅವರು ಮುಸಲ್ಮಾನರನ್ನು ಮುರಿಬಡಿದು ಯಾವಾಗ ಸೇಡು ತೀರಿಸಿಕೊಳ್ಳುವೆವೋ ಎಂದು ಒಂದೇಸಮನೆ ಹಾತೊರೆಯುತ್ತಿದ್ದರು. ದೇವರಾಯನ ಸೈನ್ಯಕ್ಕೂ ಫಿರೂಝನ ಸೈನ್ಯಕ್ಕೂ ಉಗ್ರವಾದ ಕಾಳಗವೆಸಗಿತು. ಧೈರ್ಯಮೇರುವಾದ ದೇವರಾಯನ ಸೈನಿಕನೊಬ್ಬನು ಮುಸಲ್ಮಾನ ಸೇನಾಪತಿಯ ತಲೆಯಮೇಲೆ ರಭಸದಿಂದ ಖಡ್ಗ ಪ್ರಹಾರವನ್ನು ಮಾಡಿದನು. ಕೂಡಲೆ ಆ ಸೇನಾಪತಿಯು ಯಮಲೋಕವನ್ನು ಕಂಡನು. ಸುಲ್ತಾನನೂ ದೇವರಾಯನ ಹೊಡೆತಕ್ಕೆ ತುತ್ತಾಗತಕ್ಕವನೇ ಆದರೆ, ಆತನು ಅತ್ಯಂತ ಸಾಹಸದಿಂದ ಪಾರಾಗಿ ಓಡಿಹೋದನು. ಆಗ ಕೇಳುವುದೇನು? ಹಿಂದೂಗಳಿಗೆ ಹಬ್ಬವಾದಂತಾಯಿತು. ಬಹಳ ದಿವಸಗಳಿಂದ ಹೃದಯದಲ್ಲಿ ಹುದುಗಿಗೊಂಡು ಕುಳಿತಿದ್ದ ಅವರ ಕೋಪಾಗ್ನಿಗೆ ಚಂಡಮಾರುತನು ಸೋಂಕಿದಂತಾಯಿತು. ಆ ರಣಮಂಡಳದಲ್ಲಿ ಹಿಂದೂಗಳು ಮುಸಲ್ಮಾನರನ್ನು ತುಂಡುತುಂಡಾಗಿ ಕಡಿದು ಚೆಲ್ಲಾಡಿ ಚೆಂಡಾಟವಾಡಿದರು, ಆ ರಣಾಂಗಣದಲ್ಲಿ ಮುಸಲ್ಮಾನರ ರುಂಡಗಳದೊಂದು ದೊಡ್ಡ ಅಟ್ಟಣಿಗೆಯನ್ನೇ ಕಟ್ಟಿದರು. ಹಿಂದುಗಳು ಸುಲ್ತಾನನ್ನು ಬೆಂಕೊಂಡು, ಆತನ ಸೀಮೆಗಳನ್ನು ಕೈಕೊಂಡು, ನಿಜದೋರ್ದಂಡದಿಂದ ಅನೇಕ ವೀರರನ್ನು ಉಚ್ಚಾಟನೆಗೈದರು. ಅನೇಕ ಮಸೀದಿಗಳನ್ನು ನೆಲಸಮಮಾಡಿ, ಮುಯ್ಯ ತೀರಿಸಿಕೊಂಡರು. ಮುಪ್ಪಿನ ಕಾಲದಲ್ಲಿ ತನಗುಂಟಾದ ಈ ಭಯಂಕರವಾದ ಅಪಜಯದ ಮೂಲಕ, ಫಿರೂಝಶಹನು ಹೊಟ್ಟೆಬೇನೆ ಹಚ್ಚಿಕೊಂಡು ಕೊರಗಿ ಕೊರಗಿ ಸತ್ತನು.

ಫಿರೂಝುಶಹನ ತರುವಾಯ ಆತನ ತಮ್ಮನಾದ ಅಹಮ್ಮದ್‌ಶಹನು ಸುಲ್ತಾನನಾದನು ಒಡನೆ ಆತನೂ ವಿಜಯನಗರದವರೊಡನೆ ಕಲಹಕ್ಕೆ ನಿಂತನು ಆತನೂ ಶೂರನು ಮಹತ್ವಾಕಾಂಕ್ಷಿಯು ಮಹಾಸೈನ್ಯದೊಂದಿಗೆ ತುಂಗಭದ್ರಾತೀರಕ್ಕೆ ಬಂದನು ವಿಜಯನಗರದವರು ಮುಸಲ್ಮಾನರೊಡನೆ ಯುದ್ಧಮಾಡಿದಂತೆ, ವರಂಗಲ್ಲದ ಹಿಂದೂ ಅರಸರು ದೇಶಾಭಿಮಾನದಿಂದಲೂ ಧರ್ಮಾಭಿಮಾನದಿಂದಲೂ ಕಾದಿದ್ದರೆ, ದಕ್ಷಿಣ ಹಿಂದುಸ್ಥಾನವೆಲ್ಲವೂ ಮುಸಲ್ಮಾನರಿಂದ ಬಿಡುಗಡೆ ಹೊಂದಬಹುದಾಗಿತ್ತು. ಆದರೆ, ದುರ್ದೈವದಿಂದ ವರಂಗಲ್ಲದ ಅರಸರು ಪ್ರತಾಪರುದ್ರದೇವನ ತರುವಾಯ ನಿರ್ವೀರ್ಯರಾಗಿದ್ದರು ಇಷ್ಟೇ ಅಲ್ಲ ಅವರು ವಿಜಯನಗರದವರನ್ನು ವಂಚಿಸಿ ಶತ್ರುಗಳನ್ನು ಕೂಡಿಕೊಂಡರು ದೇವರಾಯನು ವರಂಗಲ್ಲದವರನ್ನು ಅವಲಂಬಿಸಿದ್ದನು ಅವರು ತಮ್ಮ ಸೈನ್ಯವನ್ನು ತೆಗೆದುಕೊಂಡು ದೇವರಾಯನಿಗೆ ಸಹಾಯಮಾಡುವ ನೆವದಿಂದ ತುಂಗಭದ್ರಾತೀರಕ್ಕೆ ಬಂದು ತಂಗಿದ್ದರು ಆದರೆ ಯುದ್ಧವು ಪ್ರಾರಂಭವಾದೊಡನೆಯೆ ದೇವರಾಯನನ್ನು ತೊರೆದು ಶತ್ರುಗಳನ್ನು ಕೂಡಿಕೊಂಡರು. ಹೀಗೆ, ಹಿಂದುಗಳೇ ಆಕಸ್ಮಿಕವಾಗಿ ಮೋಸಮಾಡಿದ್ದರಿಂದ ದೇವರಾಯನು ಬಹಳ ಪೇಚಿನಲ್ಲಿ ಸಿಕ್ಕನು ವರಂಗಲ್ಲದವರ ಮೋಸದಿಂದ ಒಳನುಗ್ಗಿದ ಮುಸಲ್ಮಾನ ಸೈನಿಕರು, ದೇವರಾಯನು ಸ್ವಸ್ಥಚಿತ್ತದಿಂದ ಮಲಗಿಕೊಂಡಿರುವ ತೋಟವನ್ನು ಹೊಕ್ಕರು ದೇವರಾಯನು ಅಡಬಡಿಸಿ ಎದ್ದು ಒಂದು ಕಬ್ಬಿನ ತೋಟವನ್ನು ಸೇರಿದನು. ಮುಸಲ್ಮಾನ ಸೈನಿಕರು ಆತನನ್ನು ಹಿಡಿದರು! ಆತನು ಅರಸನೆಂದು ಅವರು ಗುರುತಿಸಲಿಲ್ಲ. ಆತನು ಯಾವನೋ ಒಬ್ಬ ಸಾಮಾನ್ಯ ಮನುಷ್ಯನಿರಬಹುದೆಂದು ತಿಳಿದು, ಕೆಲವು ಕಬ್ಬಿನ ದಂಟುಗಳನ್ನು ಮುರಿದು ಆತನ ತಲೆಯಮೇಲೆ ಹೊರಿಸಿ ನಡೆಯಿಸಿದರು! ಹೀಗೆ ಅಖಂಡ ಕರ್ನಾಟಕ ಸಾಮ್ರಾಜ್ಯವನ್ನು ಹೊತ್ತ ದೇವರಾಯನ ತಲೆಯು ದೈವದುರ್ವಿಪಾಕದಿಂದ ಕಬ್ಬಿನ ಗಣಿಕೆಗಳ ಹೊರೆಯನ್ನು ಹೊತ್ತಿತು! ಅಷ್ಟರಲ್ಲಿ ಸುಲ್ತಾನನ ಸೈನಿಕರು ಹಿಂದುಗಳನ್ನು ಸೋಲಿಸಿ ಸುಲಿಗೆಯನ್ನು ನಡೆಯಿಸಿದ್ದರು. ಅದನ್ನು ಕೇಳಿ, ಈ ಸೊಟ್ಟ ಕಬ್ಬಿನ ಸುಲಿಗೆಗಿಂತ ಹೆಚ್ಚಿನ ಸುಲಿಗೆ ದೊರೆವು

ದೆಂದು ಆತಪಟ್ಟು, ದೇವರಾಯನನ್ನು ಅಲ್ಲಿಯೇ ಬಿಟ್ಟುಕೊಟ್ಟು ಎರಡ ನಯ ಕಡೆಗೆ ತೆರಳಿದರು ಕೂಡಲೆ, ದೇವರಾಯನು ಕಬ್ಬಿನ ಹೊರೆಯನ್ನು ಚಲ್ಲಿಕೊಟ್ಟು ತನ್ನ ಸೈನಿಕರನ್ನು ಕೂಡಿಕೊಂಡನು ಆಗ ಅವರಿಗಾದ ಆನಂದವನ್ನು ಬಣ್ಣಿಸಲಳವಲ್ಲ ತಮ್ಮ ಮಹಾರಾಜನು ಹೀಗೆ ಜೀವದಮೇಲಿನ ಕುತ್ತಿನೊಳಗಿಂದ ಪಾರಾಗಿ ಬಂದೊಡನೆ ಅವರ ಮೈಯಲ್ಲಿ ಹೊಸ ವೀರಾವೇಶವು ತುಂಬಿ ಅವರು ಇಮ್ಮಡಿ ಹುರುಪಿನಿಂದ ಕಡಂಗಿ ಕಾದಿದರು ಆದರೆ ದೇವರಾಯನು ತನಗುಂಟಾದ ಆಪತ್ತಿಯನ್ನು ಅಪಶಕುನವೆಂದು ಭಾವಿಸಿ, ಯುದ್ಧ ಮಾಡದೆ ವಿಜಯನಗರಕ್ಕೆ ಮರಳಿದನು ಆಗ, ಅಹಮ್ಮದನಿಗೆ ಆನಂದವಾಯಿತು ಆತನ ಸೈನಿಕರು ಹಿಂದುಗಳನ್ನು ಸಿಕ್ಕ ಸಿಕ್ಕಲ್ಲಿ ಕೊಚ್ಚಿ ಚಲ್ಲಿದರು, ಮೂರ್ತಿಗಳನ್ನು ಒಡೆದರು, ದೇಶವನ್ನು ಸೂರೆಗೊಂಡರು ಹಿಂದುಗಳಿಗೆ ಉಂಟಾದ ಅಸಹ್ಯವಾದ ತಾಪವನ್ನು ತಾಳಲಾರದೆ, ಐದುಸಾವಿರ ಶೂರ ಹಿಂದುಗಳು ಸುಲ್ತಾನನ ತಲೆಯನ್ನು ಕಡಿದು ತರುವ ಘೋರ ಪ್ರತಿಜ್ಞೆಯನ್ನು ಮಾಡಿ ಹೊರಟರು. ಗುಪ್ತಚಾರರೂ ಸುಲ್ತಾನನ ಸಂಚಾರದ ಮೇಲೆ ಕಣ್ಣಿಟ್ಟರು ಸುಲ್ತಾನನು ಒಮ್ಮೆ ಬೇಟೆಯಾಡುವುದಕ್ಕೆ ಸ್ವಲ್ಪೇ ಜನರನ್ನು ಕರೆದುಕೊಂಡು ಅಡವಿಯಲ್ಲಿ ದೂರ ಹೋಗಿದ್ದ ಸಂಧಿಯನ್ನು ಸಾಧಿಸಿ, ಗಿಡಗನಂತೆ ಆತನ ಮೇಲೆ ದೊಪ್ಪನೆ ಬಿದ್ದರು ಸುಲ್ತಾನನು ಕೈಯಲ್ಲಿ ಜೀವಹಿಡಿದುಕೊಂಡು ಓಡಿದನು ಆದರೆ ದೈವ ಬಲವು ಆತನಿಗೆ ಅನುಕೂಲವಿತ್ತು ಅಷ್ಟರಲ್ಲಿ ಆಕಸ್ಮಿಕವಾಗಿ, ಕೆಲವು ಬಿಲ್ಲಾಳುಗಳು ಹಿಂದಿನಿಂದ ಬಂದು ಹಿಂದುಗಳನ್ನು ಕವಿದರು ಹಿಂದುಗಳು ಕತ್ತರಿಯಲ್ಲಿ ಸಿಕ್ಕು ಕೊನೆಯವರೆಗೆ ತಲೆಕಾದಿ ಸತ್ತರು ಹೀಗೆ ಈ ಯುದ್ಧಗಳಲ್ಲಿ ಇಬ್ಬರು ಚಕ್ರವರ್ತಿಗಳಯು ಗಂಡಾಂತರದೊಳಗೆ ಸಿಕ್ಕುವುದು ಆ ಇಬ್ಬರು ಚಕ್ರವರ್ತಿಗಳು ಆಕಸ್ಮಿಕವಾಗಿ ಪಾರಾಗುವುದು ವಿಚಿತ್ರವಾದ ದೈವ ಲೀಲೆಯಲ್ಲವೆ? ಇರಲಿ, ಅನಂತರ ದೇವರಾಯನಿಗೂ ಅಹಮ್ಮದನಿಗೂ ಒಪ್ಪಂದವಾಗಿ ಇಬ್ಬರೂ ವೈಭವದಿಂದ ರಾಜ್ಯವಾಳಿದರು ಹಿಂದುಗಳಿಗೆ ಮೋಸಮಾಡಿದ ವರಂಗಲ್ಲದವರಿಗೆ ಮಾತ್ರ ತಕ್ಕ ಪ್ರಾಯಶ್ಚಿತ್ತವು ದೊರೆಯಿತು ಅಹಮ್ಮದನು

ಈ ಯುದ್ಧ ಮುಗಿದೊಡನೆ ವರಂಗಲ್ಲಿಗೆ ಒತ್ತಿ ಹೋಗಿ ಅದನ್ನು ಪೂರ್ಣವಾಗಿ ಸುಂಗಿ ನೀರು ಕುಡಿದನು ಅಂದಿನಿಂದ ವರಂಗಲ್ಲ ರಾಜ್ಯವು ಇತಿಹಾಸದಿಂದ ಪೂರಾ ನಾಮಶೇಷವಾಗಿ ಹೋಯಿತು

ಅಹಮ್ಮದಶಹನ ತರುವಾಯ ೧೪೩೫ ರಲ್ಲಿ ಅಲ್ಲಾವುದ್ದೀನನೆಂಬವನು ಬಾಮಿನಿರಾಜ್ಯಕ್ಕೆ ಸುಲ್ತಾನನಾದನು ತೀವ್ರವೇ ತನ್ನ ತಮ್ಮನನ್ನು ದೇವರಾಯನೊಡನೆ ಯುದ್ಧಮಾಡುವುದಕ್ಕೆ ಕಳುಹಿಸಿದನು ದೇವರಾಯನು ಆ ತಮ್ಮನನ್ನು ತನ್ನ ಕಡೆಗೆ ಒಡೆದುಕೊಂಡನು ತಮ್ಮನು ಅಲ್ಲಾವುದ್ದೀನನ ಮೇಲೆಯೇ ತಿರುಗಿಬಿದ್ದನು ಆದರೆ, ಮುಂದ ಅಣ್ಣ ತಮ್ಮಂದಿರಿಬ್ಬರೂ ಪುನಃ ಕೂಡಿಕೊಂಡರು ದೇವರಾಯನು ತನ್ನ ಸೈನ್ಯದಲ್ಲಿ ಮುಸಲ್ಮಾನರನ್ನಿಟ್ಟುಕೊಂಡು ತನ್ನ ಸೈನಿಕರಿಗೆ ಅವರಿಂದ ಲಷ್ಕರ ಶಿಕ್ಷಣವನ್ನು ಕೊಡಿಸುವ ಕ್ರಮವನ್ನು ಪ್ರಾರಂಭಮಾಡಿದನು ಈ ರೀತಿಯಾಗಿ ದೇವರಾಯನು ತನ್ನ ಆಯುಷ್ಯದಲ್ಲೆಲ್ಲ ವೀರತನದಿಂದ ಕಾದಿ, ಮುಸಲ್ಮಾನರ ವರ್ಚಸ್ಸನ್ನು ಬೆಳೆಸಗೊಡದೆ ಇರುವಾಗ, ಆತನ ಅರಮನೆಯಲ್ಲಿ ಒಂದು ಭಯಂಕರವಾದ ಮೋಸವು ಸಂಭವಿಸಿತು! ಆತನ ತಮ್ಮನೇ ಈ ಮೋಸಗಾರನು ಆತನ ಮನದಲ್ಲಿ ತಾನು ಅರಸನಾಗಬೇಕೆಂಬ ಕೆಟ್ಟ ಬುದ್ಧಿ ಹುಟ್ಟಿತು ಆ ತಮ್ಮನು ಶೂರನೂ ಅಲ್ಲ, ಲೋಕಪ್ರಿಯನೂ ಅಲ್ಲ, ಪರಮ ನೀಚನು, ಕ್ರೂರನು, ವಂಚಕನು, ನಿಷ್ಕರುಣಿಯು ಆತನು ತನ್ನ ಅಣ್ಣನಾದ ದೇವರಾಯನನ್ನೂ ಸಾಮ್ರಾಜ್ಯದೊಳಗಿನ ಯಾವತ್ತು ಪ್ರಮುಖರನ್ನೂ ಕೊಲ್ಲುವುದಕ್ಕೆ ಮಾಡ್ತದೊಂದು ಒಳಸಂಚು ಮಾಡಿದನು ಆ ಹೇಡಿಯು ತಾನು ಹೊಸದಾಗಿ ಕಟ್ಟಿಸಿದ ತನ್ನ ಅರಮನೆಗೆ ಒಂದು ದಿನ' ತನ್ನ ಅಣ್ಣನಿಗೂ ಊರೊಳಗಿನ ಪ್ರಮುಖರೆಲ್ಲರಿಗೂ ಔತಣವನ್ನು ಕೊಟ್ಟನು ಮರೆಯಲ್ಲಿ ಒಬ್ಬೊಬ್ಬರೇ ಊಟಮಾಡುವುದು ಆಗಿನ ಕಾಲದ ಅರಮನೆಯ ಪದ್ಧತಿ ಈ ಪದ್ಧತಿಯ ಲಾಭವನ್ನು ತೆಗೆದುಕೊಂತು, ಆ ನರಾಧಮನು ಭೋಜನಶಾಲೆಯಲ್ಲಿ ಇಬ್ಬರು ಕೊಲೆಗಡಿಕರನ್ನು ಕುಳ್ಳಿರಿಸಿದ್ದನು ಅತಿಥಿಗಳ ಸತ್ಕಾರಾರ್ಥವಾಗಿ ವಿವಿಧ ವಾದ್ಯಗಳು ಕಿವಿಗಡಚಿಕ್ಕುವಂತೆ ಮೊಳಗುತ್ತಿದ್ದುವು ಒಬ್ಬೊಬ್ಬನೇ ಅತಿಥಿಯು ಭೋಜ

ನಶಾಲೆಯನ್ನು ಹೊಕ್ಕಕೂಡಲೆ, ಕೊಲೆಗಡಕರಿಂದ ಕೊಲ್ಲಲ್ಪಟ್ಟು ಯಮ
ಸದನಕ್ಕೆ ಅತಿಥಿಯಾಗಿ ಹೋಗುತ್ತಿದ್ದನು ಕಲ್ಪನಾತೀತವಾದ ಈ ಕಪಟ
ದುಷ್ಕೃತ್ಯವು ಯಾರಿಗೂ ಗೊತ್ತಾಗಲಿಲ್ಲ ಈ ಬಗೆಯಾಗಿ, ಆ ನರರಾಕ್ಷ
ಸನು ಪ್ರಮುಖರೆಲ್ಲರನ್ನೂ ಕೊಂದು, ಕೊನೆಗೆ ಅರಸನನ್ನು ಕೊಲ್ಲುವ
ಉದ್ದೇಶದಿಂದ ದೇವರಾಯನಿಗೆ ಊಟಕ್ಕೆ ಕರೆಯಲಿಕ್ಕೆ ಬಂದನು ಬರು
ವಾಗ ಕೈಯಲ್ಲಿ ಆ ಖೂಳನು ಕೈಸುರಿಗೆಯನ್ನು ಮುಚ್ಚಿದ್ದೊಂದು ತಾಂಬೂ
ಲದ ತಟ್ಟೆಯನ್ನು ತಂದಿದ್ದನು ದೇವರಾಯನನ್ನು ಊಟಕ್ಕೆ ಎಬ್ಬಿಸಿ
ದನು ಏನು ತೋಚಿತೋ ಏನೋ, ದೇವರಾಯನು ತನ್ನ ಪ್ರಕೃತಿಯು
ಅಸ್ವಸ್ಥವಿರುವಕಾರಣ, ಊಟಕ್ಕೆ ಬರುವುದಿಲ್ಲವೆಂದು ಹೇಳಿದನು ಆಗ
ಆ ನೀಚನಿಗೆ ಅತ್ಯಂತ ನಿರಾಶೆಯಾಯಿತು ಆ ತಟ್ಟೆಯಲ್ಲಿದ್ದ ಕಠಾರಿ
ಯನ್ನು ಹಿರಿದವನೇ ದೇವರಾಯನ ಎದೆಗೆ ಚುಚ್ಚಿದನು ದೇವರಾಯನು
ರಕ್ತಸಿಂಹಾಸನದಿಂದ ಉರುಳಿಕೊಂಡು ಬಿದ್ದನು! ದೇವರಾಯನು ಸತ್ತ
ನೆಂದು ತಿಳಿದು, ಆತನ ತಲೆಯನ್ನು ಕಡಿದು ತರುವುದಕ್ಕೆ ತನ್ನೊಬ್ಬ ಸಂ
ಗಡಿಗನಿಗೆ ಹೇಳಿ, ತಾನು ಆ ರಕ್ತಮಯವಾದ ಕಠಾರಿಯನ್ನು ಕೈಯಲ್ಲಿ
ಹಿಡಿದುಕೊಂಡು, ಧಾವಿಸಿ ಅರಮನೆಯ ಹೆಬ್ಬಾಗಿಲಿಗೆ ಬಂದು, "ಇಗೋ
ನಾನು ಅರಸನನ್ನೂ ಆತನ ತಮ್ಮಂದಿರನ್ನೂ ಬ್ರಾಹ್ಮಣರನ್ನೂ ಮಂತ್ರಿ
ಗಳನ್ನೂ ಕೊಂದಿರುವೆನು ಈಗ, ನಾನು ನಿಮ್ಮ ಅರಸು" ಎಂದು ಜನ
ರಿಗೆ ಕೂಗಿ ಹೇಳುತ್ತಿದ್ದನು ಇತ್ತ, ದೇವರಾಯನ ತಲೆಯನ್ನು ಕಡಿ
ಯುವುದಕ್ಕೆ ಆ ಸಂಗಡಿಗನು ಬಂದನು ದೇವರಾಯನ ಜೀವವು ಹೋಗಿ
ದ್ದಿಲ್ಲ ಆದಕಾರಣ, ಆತನು ಚೇತರಿಸಿಕೊಂಡೆದ್ದು ಒಂದೇ ಏಟಿನಲ್ಲಿ
ಆ ಸಂಗಡಿಗನನ್ನು ಯಮಸದನಕ್ಕೆ ಅಟ್ಟಿ, ತಾನೂ ಅರಮನೆಯ ಹೆಬ್ಬಾ
ಗಿಲಿಗೆ ಬಂದನು ಜನರು ತಮಗೆ ಪೂಜ್ಯನಾದ ಅರಸನು ಜೀವದಿಂದಿರು
ವುದನ್ನು ನೋಡಿದೊಡನೆಯೇ, ಹೆಬ್ಬುಲಿಯಂತೆ ಹಾರಿ ಹೋಗಿ ಆ ರಾಜನ
ನರಾಧಮನಾದ ತಮ್ಮನನ್ನು ತುಂಡರಿಸಿ ಒಗೆದರು! ದೇವರಾಯನು ತನ್ನ
ಪ್ರಜೆಗಳ ಸಹಾಯದಿಂದ ಸಂಚುಗಾರರೆಲ್ಲರನ್ನೂ ಹಿಡಿದು ಕೊಲ್ಲಿಸಿದನು.

ವಿಜಯನಗರದ ಅರಸನಾದ ದೇವರಾಯನು ಈ ಬಗೆಯಾಗಿ ತನ್ನ
ರಾಜಧಾನಿಯಲ್ಲಿ ಸಂಕಟದಲ್ಲಿ ಸಿಲ್ಕಿರುವ ಸಂಧಿಯನ್ನು ಸಾಧಿಸಿ, ವಿಜಯ

ನಗರದ ಕಡುವೈರಿಯಾದ ಬಾಮನಿ ಸುಲ್ತಾನನಾದ ಅಲ್ಲಾವುದ್ದೀನನು, ದೇವರಾಯನು ತನಗೆ ಕಪ್ಪವನ್ನು ಕೊಡಬೇಕೆಂದೂ ಇಲ್ಲವಾದರ ಯುದ್ಧ ವನ್ನು ಸಾರುವೆನೆಂದೂ ಹೇಳಿಕಳುಹಿದನು ಆದರೆ, ದೇವರಾಯನು ಅತ್ಯಂತ ಧೀರನು, ಆತನು ತಿಲಮಾತ್ರವೂ ಎದಗೆಡದೆ, ಕಪ್ಪವನ್ನು ಸರ್ವ ಥಾ ಕೊಡುವುದಿಲ್ಲವೆಂದು ನಿಕ್ಷುಣ್ಣವಾಗಿ ಹೇಳಿಕಳುಹಿದನು ಉಭಯ ತರೂ ಸೈನ್ಯವನ್ನು ಸಜ್ಜುಗೊಳಿಸಿದರು ಮುದಗಲ್ಲಿನ ಹತ್ತಿರ ಪುನಃ ಎರಡು ತಿಂಗಳವರೆಗೆ ಭಯಾನಕವಾದ ಕದನವಾಯಿತು ಮೊದಲು ಹಿಂದೂಗಳಿಗೆ ಜಯವಾಯಿತು ಕೊನೆಯ ಸುರಿಗೆ ಕಾಳಗದಲ್ಲಿ ದೇವ ರಾಯನ ಮಗನಿಗೆ ಗಾಯವಾಯಿತು ಆಗ, ದೇವರಾಯನ ಸೈನ್ಯದವರು ಮುದಗಲ್ಲಿನ ಭದ್ರವಾದ ಕೋಟೆಯನ್ನು ಆಶ್ರಯಿಸಿದರು ಇಬ್ಬರು ಮುಸಲ್ಮಾನ ವೀರರು ಕೋಟೆಯ ಒಳಗೆ ನುಗ್ಗಿ ಬಂದರು ದೇವರಾಯನ ಸೈನ್ಯದವರು ಅವರನ್ನು ಸರೆಹಿಡಿದರು ಪುನಃ ಹಿಂದೂಗಳ ಮತ್ತು ಹಿಂದೂ ರಾಜ್ಯದ ಗೋಜಿಗೆ ಸುಲ್ತಾನನು ಹೋಗುವುದಿಲ್ಲವೆಂದು ವಚನ ಕೊಟ್ಟರ ಮಾತ್ರ ಆ ಮುಸಲ್ಮಾನ ವೀರರನ್ನು ಬಂಧಮುಕ್ತರನ್ನಾಗಿ ಮಾಡಿ ಒಪ್ಪಂದ ಮಾಡಿಕೊಳ್ಳುವೆನೆಂದು ದೇವರಾಯನು ಸುಲ್ತಾನನಿಗೆ ಹೇಳಿ ಕಳುಹಿದನು ಸುಲ್ತಾನನು ನಿರುಪಾಯನಾಗಿ ಅದಕ್ಕೆ ಒಡಂಬಟ್ಟು ದೇವರಾಯನೊಡನೆ ಸಂಧಿಯನ್ನು ಮಾಡಿಕೊಂಡನು

ಈ ರೀತಿಯಾಗಿ, ಪ್ರತಾಪಶಾಲಿಯಾದ ದೇವರಾಯನು ಎಂತಹ ವಿಪತ್ತು ಒದಗಿದರೂ ಧೈರ್ಯಗುಂದದೆ ಧುರಧೀರನಾಗಿ ಕಾದಿ, ಶತ್ರು ಗಳನ್ನು ಮರ್ದಿಸಿ ವಿಜಯೋತ್ಸವದಿಂದ ರಾಜ್ಯವಾಳಿ ಮೆರೆದನು.



ಕ್ಷತ್ರಿಯ ಶಿಖಾಮಣಿಯಾದ

# ಕೃಷ್ಣದೇವರಾಯ

(೧೫೦೯-೧೫೨೯)

ವಿಜಯನಗರದ ಕೃಷ್ಣದೇವರಾಯನ ಕಾಲವೆಂದರ ದಕ್ಷಿಣ ಹಿಂದು ಸ್ಥಾನವು ಪರಮಾವಧಿ ಘನತೆಯನ್ನು ಹೊಂದಿದ ಕಾಲ ಮುಸಲ್ಮಾನರನ್ನು ಸಂಪೂರ್ಣವಾಗಿ ತಡೆದು ಹಿಡಿದ ಕಾಲ ಹುಕ್ಕಬುಕ್ಕರು ಶ್ರೀ ವಿದ್ಯಾರಣ್ಯರ ಪ್ರೇರಣೆಯಿಂದ ಸ್ಥಾಪಿಸಿದ ಈ ಕರ್ನಾಟಕ ಸಿಂಹಾಸನವು ದಿನದಿನಕ್ಕೆ ವೃದ್ಧಿಂಗತವಾಗುತ್ತ, ಕೃಷ್ಣದೇವರಾಯನ ಆಳಿಕೆಯಲ್ಲಿ ಅದು ವೈಭವ ಶಿಖರವನ್ನು ತಲುಪಿತು ಮುಂದ, ವಿಜಯ ಶ್ರೀಗೆ ಏರಲು ಅವಕಾಶವೇ ಇಲ್ಲದುದರಿಂದಲೋ ಏನೋ, ಕೃಷ್ಣದೇವರಾಯನ ಆಳಿಕೆ ಮುಗಿದೊಡನ ಅವಳು ಆ ಶಿಖರದಿಂದ ಇಳಿಯಲಾರಂಭಿಸಿದಳು, ಮತ್ತು ತೀವ್ರವೆ ಕಾಲುತಪ್ಪಿದ್ದರಿಂದ ಜಾರಿಕೊಂಡು ದೊಪ್ಪನ ನಲಕ್ಕುರುಳಿದಳು ಆಗ ಕರ್ನಾಟಕ ವಿಜಯ ಶ್ರೀಯು ವಿಶ್ರಾಂತಿ ನಿದ್ರೆಯನ್ನು ಮಾಡುತ್ತಾ ಮಲಗಿದವಳು ಈವರೆಗೆ ಅವಳು ಘೋರವಾದ ನಿದ್ರೆಯನ್ನು ಮಾಡುತ್ತಲೇ ಮಲಗಿರುವಳು ಇರಲಿ, ಈಗ ಕರ್ನಾಟಕದ ವೀರತ್ವದ ವರ್ಣನಯನ್ನು ಮಾಡುವುದಷ್ಟೆ ನಮ್ಮ ಕರ್ತವ್ಯವಾಗಿರುವುದರಿಂದ, ನಾವು ಈ ಕ್ಷತ್ರಿಯ ಶಿಖಾಮಣಿಯ ವೀರತ್ವವನ್ನು ಇಲ್ಲಿ ವರ್ಣಿಸುತ್ತೇವೆ

ಕೃಷ್ಣದೇವರಾಯನು ಬಹಳ ಸುಂದರವಾದ ಮತ್ತು ದೃಢವಾದ ಮೈಕಟ್ಟುಳ್ಳವನು ಆತನು ದಿನಾಲು ಗರಡೀ ಸಾಧನವನ್ನು ತಪ್ಪದೆ ಮಾಡುತ್ತಿದ್ದನು ಕುದುರೆಯನ್ನೇರುವುದರಲ್ಲಿ ಹೆಸರಾದವನು ಪ್ರಾತಃ

ಕಾಲದಲ್ಲಿ ಆತನು ಬೇಗನ ಎದ್ದು, ಲೋಡುಗಳನ್ನು ಮತ್ತು ಕತ್ತಿಯನ್ನು ತಿರುವುತ್ತಿದ್ದನು ಆತನ ಮುಖಮುದ್ರೆ ಸದಾ ಗಂಭೀರವೂ ಸ್ವಭಾವವು ಉದಾತ್ತವೂ ಆಗಿತ್ತು ತನ್ನ ಸೈನ್ಯಕ್ಕೆ ಬಹುಶಃ ತಾನೇ ಸೇನಾಪತಿಯಾಗುತ್ತಿದ್ದನು ಆತನ ಆಯುಷ್ಯದ ಮುಖ್ಯ ಕಾರ್ಯವೆಂದರೆ ಮುಸಲ್ಮಾನರನ್ನು ಹಣ್ಣುಮಾಡುವುದು ಆ ಕಾರ್ಯದಲ್ಲಿ ಆತನು ಸಂಪೂರ್ಣವಾಗಿ ಯಶಸ್ವಿಯಾದನು ಆತನ ಆಳಿಕೆಯಲ್ಲಿ ಮುಸಲ್ಮಾನರು ತೀರ ದುರ್ದಶೆಗೆ ಬಂದರು ವೈರಿಕುಲಕಾಲದಂಡನಾದ ಕೃಷ್ಣದೇವರಾಯನ ಹೆಸರು ಕೇಳಿದೊಡನೆ ಗಡಗಡ ನಡುಗುವಷ್ಟು ಆತನ ಶೌರ್ಯದ ಪ್ರತಾಪವು ಬೆಳಗಿತ್ತು ಆತನು ಮುಸಲ್ಮಾನರನ್ನು ತಡೆದು ಹಿಡಿದುದಲ್ಲದ, ದಕ್ಷಿಣ ಮತ್ತು ಪೂರ್ವ ದೇಶಗಳಲ್ಲಿ ಅನೇಕ ಅರಸರನ್ನು ಗೆದ್ದು ವಿಜಯನಗರದ ವೈಭವವನ್ನು ಮಿತಿಮೀರಿ ಬೆಳಿಸಿದನು ಶ್ರೀರಂಗಪಟ್ಟಣ, ಬಂಕಾಪುರ, ಗೆರಸಪ್ಪೆ, ಕಾಲೀಕತ್ತ, ಭಟಕುಳ, ಬಾರಕೂರ ಮುಂತಾದ ಸ್ಥಳಗಳಲ್ಲಿಯ ಅರಸರಲ್ಲರೂ ಆತನ ಮಾಂಡಲಿಕರು ಅಪ್ರತಿಮ ಪ್ರತಾಪನಾದ ಈತನ ಖಡ್ಗದ ಅಲುಗಿಗೆ ಮೆಯ್ಯೊಡ್ಡಲಾರದ ವೈರಿಬಳಗವು ಬಳುಕಿತು

ಕೃಷ್ಣದೇವರಾಯನು ೧೫೧೯ ನಯ ಇಸ್ವಿಯಲ್ಲಿ ಬಾಮನಿರಾಜ್ಯದ ಮೇಲೆ ದಂಡೆತ್ತಿ ಹೋದನು ರಾಯಚೂರ ಕೋಟೆಯನ್ನು ಮುತ್ತಿದನು ಆಗ ಮುಸಲ್ಮಾನರಿಗೂ ಹಿಂದುಗಳಿಗೂ ದೊಡ್ಡ ಕಾಳಗವಾಯಿತು. ಮುಸಲ್ಮಾನರು ಮುನಿದು ಕಾದಿದರು, ಹಿಂದುಗಳು ಹರಿದು ಕಾದಿದರು ಮುನಿಸಿನಿಂದ ಮಾರಾಂತ ವೀರಾದಿಗಳನ್ನು ರಣಕೇಳಿಕುತೂಹಲಿಯಾದ ಕೃಷ್ಣದೇವರಾಯನು ಸಂಗ್ರಾಮರಂಗದಲ್ಲಿ ಎಡೆಬಿಡದ ಈಡಾಡಿ ತನ್ನ ಅದ್ಭುತವಾದ ವೀರವಿಭವವನ್ನು ತೋರಿಸಿದನು ಆಗ, ಶತ್ರುಗಳ ಪೊಂಗು ಅಡಗಿತು, ದರ್ಪವು ಓಗಡಿಸಿತು, ಆ ಕಾಳಗದಲ್ಲಿ ಮುಸಲ್ಮಾನ ವೀರರಲ್ಲನೇಕರು ಕೃತಾಂತನಂತಿರುವ ಕೃಷ್ಣದೇವರಾಯನ ಕೋಪದ ಉಬ್ಬಿಗೆ ಉರಿಯಾದರು ಕೊನಗೆ ಆ ಕೋಟೆಯು ಕೃಷ್ಣದೇವರಾಯನ ಕೈವಶವಾಯಿತು ಕೃಷ್ಣದೇವರಾಯನು ವಿಜಯಧ್ವಜವನ್ನು ಮೆರೆಯಿಸುತ್ತ ವಿಜಯನಗರಕ್ಕೆ ಮರಳಿ ಬಂದನು.

ಅಷ್ಟರಲ್ಲಿ, ದಕ್ಷಿಣದಲ್ಲಿ, ಉಮುತ್ತೂರು ಎಂಬಲ್ಲಿಯ ಮಾಂಡಲಿಕನು ಕೃಷ್ಣದೇವರಾಯನ ವಿರುದ್ಧವಾಗಿ ಬಂಡೆಬ್ಬಿಸಿದನು ಆತನನ್ನು ದಂಡಿಸುವುದಕ್ಕೋಸ್ಕರ, ಕೃಷ್ಣದೇವರಾಯನು ದಕ್ಷಿಣಕ್ಕೆ ಬಂದನು ಉಮ್ಮತ್ತೂರಿನ ಗಂಗರಾಜನಿಗೂ ಕೃಷ್ಣದೇವರಾಯನಿಗೂ ಯುದ್ಧವಾಯಿತು ಆ ಯುದ್ಧದಲ್ಲಿ ಕೃಷ್ಣದೇವರಾಯನು ಮಾರಾಂತಹಿತರ ತಲೆಗಳನ್ನು ಚೆಂಡು ಹೊಯ್ದಂತೆ ಹಾರಿಸುತ್ತಿರಲು, ಮುಂಡಗಳು ಜೊಂಡು ಮುಂದಾಗಿ ಉರುಳಿದವು ಉಮ್ಮತ್ತೂರ ಅರಸನ ಅಂಕಿತದಲ್ಲಿದ್ದ ಶಿವಸಮುದ್ರದ ಭದ್ರವಾದ ಕೋಟೆಯು ಕೃಷ್ಣರಾಜನ ಹಸ್ತಗತವಾಯಿತು ಆ ಬಳಿಕ, ಆತನು ಶ್ರೀರಂಗಪಟ್ಟಣವನ್ನು ಹಿಡಿದುಕೊಂಡನು

ಆ ಬಳಿಕ, ಈ ವೀರನು ಪೂರ್ವದಿಕ್ಕಿನ ಕಡೆಗೆ ವಿಜಯಯಾತ್ರೆಗೆ ಹೊರಟನು ೧೫೧೩ನೆಯ ಇಸ್ವಿಯಲ್ಲಿ, ಆತನು ಒಡಿಸಾದೇಶದ ಅರಸನ ವಶದಲ್ಲಿರುವ ನೆಲ್ಲೂರು ಜಿಲ್ಲೆಯೊಳಗಿನ ಉದಯಗಿರಿ ಎಂಬ ಕೋಟೆಯ ಮೇಲೆ ಧಾಳಿ ಇಟ್ಟನು ಉದಯಗಿರಿಯ ಅರಸನ ಸೈನ್ಯಕ್ಕೂ ಕೃಷ್ಣದೇವ ರಾಯನಿಗೂ ಕಡುತರವಾದ ಕಾಳಗವೆಸಗಿತು ಕೃಷ್ಣದೇವರಾಯನ ಧಾಳಿಯನ್ನು ಹತ್ತಿಕ್ಕುವುದಕ್ಕೆ ಆ ಅರಸನ ಸೈನ್ಯವು ಬಹಳ ಶ್ರಮಪಟ್ಟಿತು ಆದರೆ ಅದು ಸಾಧ್ಯವಾಗಲಿಲ್ಲ ವೈರಿನಿಕರವು ದೂರದಲ್ಲಿ ಬಂದೊಡ್ಡಿರಲು, ಕೃಷ್ಣದೇವರಾಯನು ತನ್ನ ಕರಾಳ ಕರವಾಳವನ್ನೆತ್ತಿ, ರಿಪುಗಳನ್ನು ತರಿದು, ಉದಯಗಿರಿಯ ಅರಸನ ಅರಮನೆಯನ್ನು ಹೊಕ್ಕು ಅವನ ಅತ್ತೆಯನ್ನು ಸೆರೆ ಹಿಡಿದುಕೊಂಡು ವಿಜಯನಗರಕ್ಕೆ ಅವಳನ್ನು ತಂದನು ಆಮೇಲೆ ಆತನು ಕೊಂಡವೀಡು ಎಂಬ ಕೋಟೆಯನ್ನು ಮುತ್ತಿದನು ಇದೂ ಒಡಿಸಾದೇಶದ ಅರಸನ ಕೋಟೆಯು ಅಲ್ಲಿ ಆ ಅರಸನು ಸ್ವತಃ ಕೃಷ್ಣದೇವರಾಯನೊಡನೆ ಕಾಳಗಕ್ಕೆ ಅನುವಾದನು ಸೆಣಸುವರ ಗಂಡನಾದ ಕೃಷ್ಣದೇವರಾಯನು ರಣದಲ್ಲಿ ಅರಾತಿಭೂಪನ ಬಲಗಳನ್ನು ಉಗ್ರವಾದ ತನ್ನ ಭುಜಾಸಿಯಲ್ಲಿ ಖಣಿಲ್ ಖಣಿಲ್ ಎನ್ನುವಂತೆ ತಳ್ತು ಹೊಯ್ದು, ಆ ಹೊಯ್ಲಿನಲ್ಲಿ ರಿಪು ಸೈನ್ಯವನ್ನು ಉರುಳಿಸಿದನು ಮುನಿಸಿನಿಂದ ಮಾರಾಂತ ವೀರಾಧಿವೀರರನ್ನು ತನ್ನ ಮೈಗಲಿ

ತನದಿಂದ ಸೋಲಿಸಿ, ಅವರ ಉರಗಳನ್ನು ಧೊಕ್ಕನೆ ಕುತ್ತಿ, ಚಕ್ಕನೆ ಭುಜ ದ್ವಂದ್ವಗಳಿಂದ ಅವುಗಳನ್ನೆತ್ತಿ, ಅವರ ಬಲ್ಗರುಳುಗಳಿಂದ ಬೀರಸಿರಿಗೆ ತೋರಣವನ್ನು ಕಟ್ಟಿದನು ಎರಡು ತಿಂಗಳು ಹೀಗೆ ಘನ ಘೋರವಾದ ಸಂಗ್ರಾಮವಾದ ಬಳಿಕ, ಆ ಕೋಟೆಯು ಕೃಷ್ಣರಾಜನ ಕೈವಶವಾಯಿತು ಓಡಿಸಾದೇಶದ ಅರಸನು ಓಡಿ ಹೋದನು ಕೃಷ್ಣದೇವರಾಯನು ಆತ ನನ್ನು ಬೆಂಕೊಂಡನು ಕೊಂಡಾಪಲ್ಲಿ ಎಂಬಲ್ಲಿ ಆತನ ಹೆಂಡತಿ ಮತ್ತು ಮಗನು ಇದ್ದ ಸುದ್ದಿಯನ್ನು ಕೇಳಿ, ಕೃಷ್ಣದೇವರಾಯನು ಆ ಕೋಟೆಯ ಮೇಲೆ ಲಗ್ಗೆ ಹತ್ತಿದನು ಅದು ಆತನ ವರವಾಯಿತು ಆ ಕೋಟೆಯು ಲ್ಲಿದ್ದ ಓಡಿಸಾದೇಶದ ಅರಸನ ಹೆಂಡತಿಯನ್ನೂ ಮಗನನ್ನೂ ಆತನು ಸರ ಹಿಡಿದನು ಮುಂದ ಆತನು ರಾಜಮಹೇಂದ್ರಿಯನ್ನು ಮುತ್ತಿದನು ಆಗ, ಓಡಿಸಾದೇಶದ ಅರಸನು ಒಪ್ಪಂದಕ್ಕೆ ಆತುರನಾದನು ಇಬ್ಬ ರೊಳಗೆ ಒಪ್ಪಂದವಾಯಿತು ಈ ಪ್ರಕಾರವಾಗಿ ಕೃಷ್ಣದೇವರಾಯನು ತನ್ನ ಪೂರ್ವದೇಶದ ವಿಜಯಯಾತ್ರೆಯಲ್ಲಿ ಓಡಿಸಾದೇಶದ ಅರಸನ ಕೈ ಕೆಳಗಿದ್ದ ಉದಯಗಿರಿ, ಬೆಲ್ಲಮಕೊಂಡ, ವಿನ್ನಕೊಂಡ, ಕೊಂಡವೀಡು, ಬಿಝವಾಡ ಮತ್ತು ರಾಜಮಹೇಂದ್ರಿ ಮುಂತಾದ ಅನೇಕ ಸ್ಥಳಗಳಲ್ಲಿ ಓಡಿಸಾದೇಶದ ಅರಸನಿಗೆ ಇದಿರಾಗಿ, ಆತನ ಸೈನ್ಯವನ್ನು ಅನೇಕ ಕಾಳಗ ಗಳಲ್ಲಿ ಸೋಲಿಸಿದುದರಿಂದ, ಓಡಿಸಾದೇಶದ ಅರಸನು ಆತನಿಗೆ ಶರಣಾ ಗತನಾದನು ಅಲ್ಲದೆ, ಆತನ ಶೌರ್ಯಕ್ಕೆ ಮೆಚ್ಚಿ, ತನ್ನ ಮಗಳನ್ನು ಕೃಷ್ಣದೇವರಾಯನಿಗೆ ಲಗ್ನಮಾಡಿ ಕೊಟ್ಟನು ಮತ್ತು ತನ್ನ ರಾಜ್ಯ ವನ್ನು ಈಶಾನ್ಯದಲ್ಲಿ ಕಟಕದವರೆಗೂ ಪಶ್ಚಿಮದಲ್ಲಿ ಸಾಲಸತ್ತೆದವ ರೆಗೂ ಆತನು ಹಬ್ಬಿಸಿದನು ಆತನ ಕೀರ್ತಿಯು ದಶದಿಕ್ಕುಗಳಲ್ಲಿ ಡಾವರಿಸುತ್ತಿತ್ತು

ಆದರೆ, ಇಷ್ಟಾದರೂ ಹಿಂದುಗಳ ಆಗಿನ ಕಾಲದ ಕಡುವೈರಿಗಳಾದ ಮುಸಲ್ಮಾನರ ಗರ್ವಖಂಡನವಾಗಿದ್ದಿಲ್ಲ ಮತ್ತು ಅವರನ್ನು ಪೂರ್ಣ ವಾಗಿ ಮೆತ್ತಗೆ ಮಾಡದಿದ್ದರೆ ಹಿಂದುಗಳಿಗೆ ಸುಖವಾಗಿ ನಿದ್ರೆ ಹತ್ತುವುದು ಶಕ್ಯವಿದ್ದಿಲ್ಲ ಹಿಂದಕ್ಕೆ ಅನೇಕ ಸಾರಿ ವಿಜಯನಗರದ ಅರಸರು ಮುಸ

ಲ್ಮಾನರನ್ನು ಸೋಲಿಸಿದ್ದರು. ತದ್ವಿರುದ್ಧವಾಗಿ ಮುಸಲ್ಮಾನರೂ ಹಿಂದೂಗಳನ್ನು ಸೋಲಿಸಿದ್ದರು ಆದರೆ ಅದರಿಂದ ಮುಸಲ್ಮಾನರ ಹಾವಳಿಯು ಕಡಿಮೆಯಾಗಿದ್ದರೂ ಅವರ ಹಗೆತನವು ನಿರ್ಮೂಲವಾಗಿದ್ದಿಲ್ಲ ಆದುದರಿಂದ ಕೃಷ್ಣದೇವರಾಯನು ಮುಸಲ್ಮಾನರು ಮುಂದೆ ಎಂದೆಂದಿಗೂ ತಲೆಯೆತ್ತದಂತೆ ಅವರನ್ನು ಪೂರಾ ಬಗ್ಗು ಬಡಿಯಬೇಕೆಂದು ಯೋಚಿಸಿ, ಅಪಾರವಾದ ಸೈನ್ಯವನ್ನು ಕಲೆಹಾಕಲಾರಂಭಿಸಿದನು ಐದು ವರುಷಗಳವರೆಗೆ, ಕೃಷ್ಣದೇವರಾಯನು ಯುದ್ಧವನ್ನು ಮಾಡುವುದಕ್ಕೆ ಸನ್ನಾಹವನ್ನು ಸಜ್ಜುಗೊಳಿಸುತ್ತಿದ್ದನು ಪೂರ್ಣ ಸಿದ್ಧತೆಯಾದ ಕೂಡಲೆ ೧೫೨೦ರಲ್ಲಿ ಆತನು ವಿಜಾಪುರದ ಅದಿಲಶಹನನ್ನು ಮುರಿಬಡೆಯುವುದಕ್ಕೆ ನಿಶ್ಚಯಿಸಿ, ಆತನ ವಶದಲ್ಲಿರುವ ರಾಯಚೂರು ಕೋಟೆಯ ಮೇಲೆ ಧಾಳಿಯಿಟ್ಟನು ಆಗ ಆತನ ಸೈನ್ಯದಲ್ಲಿ ಸುಮಾರು ಹತ್ತು ಲಕ್ಷ ಜನರಿದ್ದರು ಈ ಮಹಾಸೇನಾಸಾಗರದೊಂದಿಗೆ ಸಾಗಿ, ಆತನು ರಾಯಚೂರಿನ ಪೂರ್ವದಿಕ್ಕಿನಲ್ಲಿ ಬೀಡುಬಿಟ್ಟನು ಮತ್ತು ಕೋಟೆಯನ್ನು ಮುತ್ತಿದನು ಆಗ ವಿಜಾಪುರದಿಂದ, ಅದಿಲ್‌ಶಹನೂ ಮಹಾಸೇನೆಯೊಂದಿಗೆ ಬಂದು ಕೃಷ್ಣಾನದಿಯ ಉತ್ತರ ದಂಡೆಯಲ್ಲಿ ತಳ ಊರಿದ್ದನೆಂದು ಕೇಳಿದನು ನದಿಯನ್ನು ದಾಟಿ, ರಾಯಚೂರಿಗೆ ೯ ಮೈಲು ಅಂತರದಲ್ಲಿ ಅದಿಲಶಹನು ಬಂದನು ಕೃಷ್ಣಾನದಿಯು ಹಿಂದೆ ೫ ಮೈಲು ಉಳಿದಿತ್ತು ಆಗ, ಮುಸಲ್ಮಾನರಿಗೂ ಹಿಂದುಗಳಿಗೂ ಅಭೂತಪೂರ್ವವಾದ ಕದನವು ಉಂಟಾಯಿತು ಆ ಭಯಂಕರ ಕಾಳಗದಲ್ಲಿ ಅರಿಪಡೆ ಮೆಚ್ಚುವಂತೆ ಕೃಷ್ಣದೇವರಾಯನು ತನ್ನ ಶೂರರಾದ ಪಡೆವಳರೊಂದಿಗೆ ಭೋರನೆ ಬಂದು ನಾಲ್ದೆಸೆಗೆ ಕವಿತಪ್ಪ ಶತ್ರುಸೈನ್ಯವನ್ನು ಹೊಯ್ದನು ಅವೆರಡೂ ಸೈನ್ಯಗಳು ಆಗ ತಳ್ತು ಕಾದಲಾಗಿ, ಉಭಯ ಸೈನಿಕರ ಮಸ್ತಕದ ಸಿಪ್ಪುಗಳು ಹಾರಿ ತಾಕಲಾಡಿ ಅದರಿಂದ ಕಿಡಿಕಿಡಿಗಳು ಸೂಸಿದವು ಎರಡೂ ದಳಗಳಲ್ಲಿ ವಾಜಿಗಳು ಕಡಿಕಡಿಯಾದುವು ನೆತ್ತರದ ಕಡಲು ಹರಿಯಿತು ಕೃಷ್ಣರಾಯನ ಸೈನ್ಯವು, ಕಡಂಗಿ ಗಲ್ವಬಗೆಯಿಂದ ಬಂದ ವಿರೋಧಿ ಸೈನ್ಯವನು ಹೊಕ್ಕು, ಇರಿದು, ಆರ್ದು, ತುಳ್ದು ಸುಭಟರನ್ನು ಕೊಂದು ಹಾಕಿತು.

ಆ ಸೈನ್ಯದಲ್ಲಿ ಸುರಿವ ಸರಳ್ಗಳಿಗೆ ಹಾಯುವ ಚತುರಂಗ ದಳಕ್ಕೆ ಅಣೆಮು, ಆದುರ್ಗ ನೂಂಕುವ ಆಸುರತರವಾದ ಸಿಂಧುರ ಘಟಾವಳಿಗೆ ಅಳ್ಕದ ಕಾದಿ ಕೃಷ್ಣದೇವರಾಯನ ವೀರರು ರಿಪುಬಲದ ಗರ್ವವನ್ನು ಖಂಡಿಸಿದರು ಕೃಷ್ಣದೇವರಾಯನು ತನ್ನ ವಿಶಾಲಬಾಹುಗಳ ತಿಂಡಿಯನ್ನು ತೀರಿಸಿಕೊಂಡು, ರಿಪುಗಳ ಕೆನ್ನೀರಸವಿಯನ್ನು ಅನುಭವಿಸಿದನು ಮುಳಿದು ಇದಿರಾಂತ ದುರ್ಧರ ವಿರೋಧಿಬಳಾಂಬೋಧಿಯನ್ನು ಬಹುಕಾಲದವರೆಗೆ ತಡೆದು, ಹಿಂದಕ್ಕ ನೂಕಿದನು ಗಂಡುದೋರ್ಪರಿಗೆ ವಾರಿಯಾದ ಆ ಕೃಷ್ಣದೇವರಾಯನ ಖಡ್ಗಾಘಾತಕ್ಕೆ ರಿಪುಸೈನ್ಯವು ನುಚ್ಚುನುರಿಯಾಯಿತು ಮುಸಲ್ಮಾನರೂ ಅತ್ಯಂತ ರೌದ್ರಾವೇಶವನ್ನು ತಾಳಿ, ಉರವಣೆಯಿಂದ ಕಾದು ಶತ್ರುಸೈನ್ಯವನ್ನು ಹಿಂದಕ್ಕೋಡಿಸಿದರು ಆಗ ಕೃಷ್ಣದೇವರಾಯನು ಅತುಲ ಧೈರ್ಯವನ್ನು ತೋರಿಸಿ, ತನ್ನ ಇಡೀ ಸೈನ್ಯವನ್ನು ಮುಸಲ್ಮಾನರ ಮೇಲೆ ಹಾಯಿಸಿದನು ಮುಸಲ್ಮಾನರ ದಂಡು, ನಾಲ್ಕೂದಿಕ್ಕಿಗೆ ಚದರಿ ಓಡಿಹೋಯಿತು ಕೃಷ್ಣದೇವರಾಯನು ಅವರನ್ನು ಬೆಂಕೊಂಡು, ಅವರ ರುಂಡಗಳ ರಾಶಿಯಿಂದ ರಾಯಚೂರಿನ ನೆರೆಯ ಪ್ರದೇಶವನ್ನೆಲ್ಲ ನೆರತುಂಬಿ, ಕೃಷ್ಣೆಯ ಆಚೆಗೆ ಹೋಗಿ, ಅವರನ್ನು ಸದೆಬಡೆದನು ಸುಲ್ತಾನನ್ನು ಸರೆ ಹಿಡಿಯುವವನಿದ್ದನು ಆದರೆ ಸುಲ್ತಾನನು ತಪ್ಪಿಸಿಕೊಂಡು ಆನೆಯನ್ನೇರಿ ಒಬ್ಬನೇ ಜೀವ ಉಳಿಸಿಕೊಂಡು ಓಡಿಹೋದನು ಸಲಾಬತ್ತುಖಾನನೆಂಬ ಸರದಾರನು ಹಿಂದುಗಳ ಮೇಲೆ ವೀರಾವೇಶದಿಂದ ಧಾವಿಸಿ, ಅವರನ್ನು ಸೋಲಿಸುವುದಕ್ಕೆ ಬಹಳ ಪರಾಕ್ರಮವನ್ನು ತೋರಿಸಿದನು ಆದರೆ ಆತನ ಕುದುರೆಯನ್ನು ಹಿಂದೂ ವೀರನೊಬ್ಬನು ಕೊಂದನು ಸಲಾಬತ್ತುಖಾನನು ಚಪಲತನದಿಂದ ಮತ್ತೊಂದು ಕುದುರೆಯನ್ನೇರಿ ಹಿಂದೂಗಳ ಮೇಲೆ ಹರಿದುಬಿದ್ದನು ಆದರೆ ಹಿಂದೂಗಳು ಆತನ ಸುತ್ತಲಿನ ವೀರರೆಲ್ಲರನ್ನೂ ತುಂಡರಿಸಿ, ಆತನನ್ನು ಸರೆಹಿಡಿದರು ಆಗ ಮುಸಲ್ಮಾನರು ಎದೆ ಕಳೆದುಕೊಂಡು ದಿಕ್ಕುದಿಕ್ಕಿಗೆ ಪಲಾಯನ ಮಾಡಿದರು ಈ ಪ್ರಕಾರವಾಗಿ ಕೃಷ್ಣದೇವರಾಯನು ಅದ್ವಿತೀಯವಾದ ಪರಾಕ್ರಮವನ್ನು ತೋರಿಸಿ, ಮುಸಲ್ಮಾನರನ್ನು ಈ ಯುದ್ಧದಲ್ಲಿ ಪುಟ್ಟಾಪೂರಾ ಸೋಲಿಸಿದ ಕಾರಣ, ಮುಸಲ್ಮಾನರು

ವಿಜಯನಗರದ ರಾಜ್ಯದ ಕಡೆಗೆ ಆತನ ಕಾಲದಲ್ಲಿ ಇಣುಕಿ ನೋಡಲಿಲ್ಲ.
ಇಷ್ಟೇ ಅಲ್ಲ, ಈ ಯುದ್ಧದಲ್ಲಿಯ ಹಿಂದೂಗಳ ವೀರತ್ವವನ್ನು ಮುಸಲ್ಮಾ
ನರು ಕೇಳಿದೊಡನೆ ಗಡಗಡ ನಡುಗಲಾರಂಭಿಸಿದರು ಕೃಷ್ಣದೇವರಾಯನ
ಕೀರ್ತಿಯು ಈ ವಿಜಯದಿಂದ ಹಿಂದುಸ್ಥಾನದಲ್ಲೆಲ್ಲ ಹಬ್ಬಿತು. ಮತ್ತು
ಆತನು ಇದಿರಾಳುಗಳಿಲ್ಲದ ಅನೇಕ ವರ್ಷ ಆಳಿ ಮಡಿದನು.

ಕೃಷ್ಣದೇವರಾಯನು ಮಲೆತು ನಿಂತ ಭೂಮಿಪಾಲರ ಹೆಡತಲೆ
ಗಳನ್ನು ದೂಪ್ಪನ ಹೊಯ್ದ ಗಂಡನು ಮಾರ್ಮಲೆವ ಮಾಂಡಲಿಕರನ್ನು
ಉರುಳಿಸಿದ ಗಂಡನು ತುರುಕರ ಪಡೆಯನ್ನು ಮುರಿದಟ್ಟಿದ ಗಂಡನು.
ಇಂತಹ ಗಂಡರ ಗಂಡನ ಕಾಲದಲ್ಲಿ ಕರ್ನಾಟಕದ ವೈಭವವು ಅತ್ಯುಚ್ಚ
ವಾದ ಸ್ಥಿತಿಯನ್ನು ಐದಿತು





ಕಂಠೀರವ ನರಸರಾಜ

ರಣಧೀರನಾದ

# ಕಂಠೀರವ ನರಸರಾಜ

---

(೧೬೩೮-೧೬೫೮)

ಕರ್ನಾಟಕ ಸಾಮ್ರಾಜ್ಯವು ಸುಮಾರು ಒಂದು ಸಾವಿರ ವರುಷಗಳ ವರೆಗೆ ಅಖಂಡವಾಗಿ ಅಟ್ಟಹಾಸದಿಂದ ಆಳಿ, ಮುಪ್ಪಾಗಿ ಕೊನೆಗೆ ತಾಳೀಕೋಟೆಯ ಕಾಳಗದಲ್ಲಿ, ಮಹಾ ಅಶ್ವತ್ಥ ವೃಕ್ಷವು ಉರುಳಿಕೊಂಡು ಬೀಳುವಂತೆ, ಕಡಕೊಂಡು ಬಿದ್ದುದರಿಂದ, ಕರ್ನಾಟಕದಲ್ಲಿ ಮಾತ್ರವೇ ಅಲ್ಲ, ಇಡೀ ಭರತಖಂಡದಲ್ಲಿ ಹಾಹಾಕಾರವೆದ್ದಿತು ಆಗಿನ ಕಾಲದ ಶತ್ರುಗಳಾದ ಮುಸಲ್ಮಾನರು ಸ್ವಾಭಾವಿಕವಾಗಿಯೇ ಆ ವಿಜಯದಿಂದ ಉಬ್ಬಿದವರಾಗಿ ವೈಪುರತು ಕೊಲೆಸುಲಿಗೆಗಳನ್ನು ನಡಿಸಿದರು ೧೫೬೫ನಯ ಇಸ್ವಿಯ ನಂತರದ ೬೦-೭೦ ವರುಷಗಳವರೆಗೆ ಹಿಂದುಸ್ಥಾನವು ವಿಶೇಷತಃ ಕರ್ನಾಟಕವು ಕಲ್ಪನಾತೀತವಾದ ಕಷ್ಟಗಳನ್ನನುಭವಿಸಿದ ಕಾಲವು ಆದರ, ಹಿಂದೂಜನರು ತಾಳೀಕೋಟೆಯ ಮಹಾಯುದ್ಧದಲ್ಲಿ ಸಂಪೂರ್ಣವಾಗಿ ಸೋತಿದ್ದರೂ ಅವರ ಶೌರ್ಯವು ನಷ್ಟವಾಗಿರಲಿಲ್ಲ ಅವರ ಉತ್ಸಾಹವು ಕುಗ್ಗಿರಲಿಲ್ಲ, ವೀರಶ್ರೀಯು ವಿಲಯವಾಗಿರಲಿಲ್ಲ, ಅಭಿಮಾನವು ಅಡಗಿರಲಿಲ್ಲ ಆದುದರಿಂದ, ವಿಜಯನಗರದ ಸಾಮ್ರಾಜ್ಯವು ನಷ್ಟವಾಗಿದ್ದರೂ ಅದರ ಅರಸರು ನಾಮಶೇಷರಾಗಿದ್ದರೂ ಸಾಮಾನ್ಯಜನತೆಯಲ್ಲಿ ತಮ್ಮ ಶತ್ರುಗಳ ಬಗ್ಗೆ ಇದ್ದ ಭಯಂಕರವಾದ ದ್ವೇಷವು ಮೇಲಿಂದ ಮೇಲ ಹೊರಹೊಮ್ಮುತ್ತಿತ್ತು ಮುಸಲ್ಮಾನರನ್ನು ಹತ್ತೋತ್ತಿ ಪುನಃ ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ತೀಕ್ಷ್ಣವಾದ ಲವಲವಿಕೆಯೂ, ಇದ್ದ ಹಿಂದೂ ರಾಜ್ಯಗಳನ್ನು ಬಲಪಡಿಸಬೇಕೆಂಬ ಆಕಾಂಕ್ಷೆಯೂ

ಸಾಮಾನ್ಯ ಜನತೆಯಲ್ಲಿ ಕೂಡ ಕಂಡುಬರುತ್ತಿದ್ದವು ಮಹಾರಾಷ್ಟ್ರ ಸಾಮ್ರಾಜ್ಯದ ಉದಯವೂ, ಮೈಸೂರ ರಾಜ್ಯದ ದೃಢತೆಯೂ ಈ ತೀಕ್ಷ್ಣವಾದ ಅಸಂತೋಷದ ಪರಿಣಾಮಗಳು ಉತ್ತರದಲ್ಲಿ ಶ್ರೀ ಶಿವಾಜಿಯು ಹುಟ್ಟಿ, ಮುಸಲ್ಮಾನರೊಡನೆ ಕಾದಿ ಅವರನ್ನು ಸೋಲಿಸಿ ಮಹಾರಾಷ್ಟ್ರ ಸಾಮ್ರಾಜ್ಯವನ್ನು ಸ್ಥಾಪಿಸಿದನು ಸುಮಾರು ಅದೇ ಕಾಲಕ್ಕೆ, ದಕ್ಷಿಣದಲ್ಲಿ ರಣಧೀರನಾದ ಕಂಠೀರವ ನರಸರಾಜನು ರಣದುಲ್ಲಾಖಾನನಂಥ ಶೂರ ವೀರನನ್ನು ೧೬೩೮ನೆಯ ಇಸ್ವಿಯಲ್ಲಿ ಪುಟ್ಟಾಪೂರಾ ಸೋಲಿಸಿ, ಮೈಸೂರಿನ ಸಿಂಹಾಸನವನ್ನು ಭದ್ರಪಡಿಸಿದನು ಶೌರ್ಯದಲ್ಲಿಯೂ ಸಾಹಸದಲ್ಲಿಯೂ ಸ್ವಾಭಿಮಾನದಲ್ಲಿಯೂ ಹಿಂದೂತ್ವದ ಸಂರಕ್ಷಣೆಯಲ್ಲಿಯೂ ಮೈಸೂರ ಸಂಸ್ಥಾನವು ಮಹಾರಾಷ್ಟ್ರ ಅರಸರಿಗೆ ತಿಲಪ್ರಾಯವೂ ಕಡಿಮೆಯಾಗಿರಲಿಲ್ಲ. ಮಹಾರಾಷ್ಟ್ರ ಸಾಮ್ರಾಜ್ಯವು ಹೊಯ್ದಾಡುತ್ತ ಹೊಯ್ದಾಡುತ್ತ, ಕೊನೆಗೆ ಪೇಶ್ವೆಯರ ಕಾಲದಲ್ಲಿ ಇಂಗ್ಲಿಷರಿಂದ ಪೂರ್ಣವಾಗಿ ಗ್ರಸ್ತವಾಗಿಹೋಯಿತು ಕರ್ನಾಟಕರೆಲ್ಲರಿಗೂ ಅಭಿಮಾನಕ್ಕೆ ಆಸ್ಪದವಾಗಿರುವ ಮೈಸೂರಿನ ಕರ್ನಾಟಕ ಸಂಸ್ಥಾನವು ಮಾತ್ರ, ಕನ್ನಡಿಗರ ಪೂರ್ವವೈಭವದ ಸ್ಮಾರಕವಾಗಿ ಇನ್ನೂ ನಿಂತಿರುತ್ತದೆ ಇರಲಿ

ಕರ್ನಾಟಕ ಸಾಮ್ರಾಜ್ಯವೆಂಬ ಮಹಾ ಅಶ್ವತ್ಥವೃಕ್ಷವು ಕಡಕೊಂಡು ಬಿದ್ದರೂ, ಅದರ ಶಾಖೆಗಳು ಅಲ್ಲಲ್ಲಿ ನೆಲದವರೆಗೆ ಇಳಿದು ಬೇರುಬಿಟ್ಟುಕೊಂಡಿದ್ದವು ಅವರದೊಂದು ಶಾಖೆಯು ಮೈಸೂರ ಸೀಮೆಯಲ್ಲಿ ನಟ್ಟು, ಅದಕ್ಕೆ ಮೊಳಕೆ ಒಡೆದಿತ್ತು ಅಲ್ಲಿ, ಚಾಮರಾಜನೆಂಬವನು ಚಿಕ್ಕ ಅರಸನಾಗಿ ಆಳುತ್ತಿದ್ದನು ಆತನು ತೀರಿಕೊಂಡಾಗ, ಮಾರನಾಯಕನೆಂಬ ಪಾಳೆಯಗಾರನು ಪ್ರಬಲನಾಗಿ, ಚಾಮರಾಜನ ಮಗಳನ್ನು ಮದುವೆಯಾಗುವುದಕ್ಕೆ ಹವಣಿಸಿದನು ಚಾಮರಾಜನ ಹೆಂಡತಿಯ ಮನಸ್ಸಿನಲ್ಲಿ, ತನ್ನ ಮಗಳನ್ನು ಮಾರನಾಯಕನಿಗೆ ಕೊಡಬೇಕೆಂದಿರಲಿಲ್ಲ ಆಗ, ಆತನು ಅವಳನ್ನು ಪರಿಪರಿಯಿಂದ ಪೀಡಿಸತೊಡಗಿದನು ಅವಳು ಆ ಕಾಲಕ್ಕೆ ಉತ್ತರದಿಂದ ಅಲ್ಲಿಗೆ ಬಂದು ನೆಲಸಿದ್ದ ಯದುರಾಯನೆಂಬ ವೀರನನ್ನು ಮೊರೆಹೊಕ್ಕಳು ಯದುರಾಯನು ತನ್ನ ತಮ್ಮನ ಸಹಾಯದಿಂದ

ಮಾರನಾಯಕನನ್ನು ಕೊಂದನು  ಆಗ, ಚಾಮರಾಜನ ಹೆಂಡತಿಯು ಯದುರಾಯನಿಗೆ ತನ್ನ ಮಗಳನ್ನು ಲಗ್ನಮಾಡಿಕೊಟ್ಟು, ಸಂಸ್ಥಾನದ ಅರಸೊತ್ತಿಗೆಯನ್ನು ಅವನಿಗೆ ಒಪ್ಪಿಸಿದಳು  ಇದೇ ಈಗಿನ ಮೈಸೂರು ಸಂಸ್ಥಾನದ ಮೂಲವು  ಈ ಚರಿತ್ರನಾಯಕನಾದ ರಣಧೀರ ಕಂಠೀರವ ನರಸರಾಜನು ಈ ಯದುರಾಯನಿಂದ ಹನ್ನೆರಡನೆಯವನು

ನರಸರಾಜನ ತಂದೆಯು ಕಲಕಾಲ ಅರಸನಾಗಿ ಆಳಿದರೂ ಆತನಿಗೆ ವೈರಾಗ್ಯ ಹುಟ್ಟಿದುದರಿಂದ, ಆತನು ನರಸರಾಜನು ಹುಟ್ಟುವ ೩೭ ವರ್ಷಗಳ ಪೂರ್ವದಲ್ಲಿಯೇ ರಾಜಸನ್ಯಾಸವನ್ನು ಸ್ವೀಕಾರಮಾಡಿ, ಒಂದು ಹಳ್ಳಿಯಲ್ಲಿ ಬಡವನಂತೆ ವಾಸಮಾಡಿದ್ದನು  ನರಸರಾಜನು ಆ ಹಳ್ಳಿಯಲ್ಲಿ ಹುಟ್ಟಿದನು.  ಈತನು ಬಹಳ ಪರಾಕ್ರಮಶಾಲಿ  ಚಿಕ್ಕಂದಿನಿಂದ ಅಂಗಸಾಧನವನ್ನು ಮಾಡುವುದರಲ್ಲಿಯೂ ಶಸ್ತ್ರಗಳನ್ನು ಉಪಯೋಗಿಸುವುದರಲ್ಲಿಯೂ ಬಹಳ ಕುಶಲನು  ಒಮ್ಮೆ, ತಿರುಚನಾಪಳ್ಳಿಯ ಅರಸನ ಆಶ್ರಯದಲ್ಲಿದ್ದ ಜಟ್ಟಿಯೊಬ್ಬನು, ತನಗಿಂತ ಗಟ್ಟಿಗರಾರೂ ಇಲ್ಲವೆಂಬ ಹೆಮ್ಮೆಯಿಂದ, ತನ್ನ ದಟ್ಟಿಚಲ್ಲಣಗಳನ್ನು ಕೋಟೆಯ ಅಗಸ ಬಾಗಿಲಿಗೆ ತೂಗಹಾಕಿ, ಎಂಥ ಶೂರಪುರುಷನಾದರೂ ಅದರ ಕೆಳಗಿನಿಂದ ಹಾಯ್ದು ಹೋಗುವಂತೆ ವ್ಯವಸ್ಥೆಮಾಡಿದ್ದನು  ಈ ಸುದ್ದಿಯು ಕರ್ಣಪರಂಪರೆಯಿಂದ, ನರಸರಾಜನ ಕಿವಿಗೆ ತಲುಪಿತು  ಅದನ್ನು ಕೇಳಿ, ನರಸರಾಜನ ಕಡೆಗಣ್ಣುಗಳು ಕೆಂಪುಸೂಸಿದವು, ಆತನ ಕುಡಿಮೀಸೆ ಕುಣಿಯಿತು  ಕೂಡಲೆ, ಆತನು ತನ್ನ ವೇಷವನ್ನು ಬದಲಿಸಿಕೊಂಡು, ಸಾಮಾನ್ಯ ಜಟ್ಟಿಯಂತೆ ತಿರುಚನಾಪಲ್ಲಿಗೆ ಹೋಗಿ, ಅಗಸ ಬಾಗಿಲಿಗೆ ಕಟ್ಟಿದ್ದ, ಆ ಜಟ್ಟಿಯ ದಟ್ಟಿಚಲ್ಲಣಗಳನ್ನು ಹರಿದೊಗೆದನು  ಆಗ, ಆ ಜಟ್ಟಿಗೂ ನರಸರಾಜನಿಗೂ ಮಲ್ಲಯುದ್ಧವಾಯಿತು  ಆ ಯುದ್ಧದಲ್ಲಿ, ನರಸರಾಜನು ಆ ಜಟ್ಟಿಯನ್ನು ಸೋಲಿಸಿ, ಆತನ ಕೊರಳು ಕೊಯ್ದು ಚಲ್ಲಿದನು  ಆತನ ಶೌರ್ಯಕ್ಕೆ ಅರಸನು ಮೆಚ್ಚಿ, ಆತನಿಗೆ ವಿಶೇಷ ಮರ್ಯಾದೆಯನ್ನು ಮಾಡಬೇಕೆಂದು ಯೋಚಿಸಿದನು  ಆಗ, ನರಸರಾಜನು, ತಾನು ಸಾಮಾನ್ಯ ಜಟ್ಟಿಯಲ್ಲವೆಂದೂ ಮೈಸೂರ ದೊರೆಯಮನೆತನದವನೆಂದೂ ಅಗಸೆಯ ಬಾಗಿಲಿಗೆ ಚೀಟಿಯನ್ನು ಕಟ್ಟಿಟ್ಟು ತನ್ನ ಊರಿಗೆ ಬಂದುಬಿಟ್ಟನು.

ಹೀಗೆ ಊರಿಗೆ ಬರುವಾಗ ದಾರಿಯಲ್ಲಿ, ಒಂದು ಬಳಪದ ಕಂಬವನ್ನು ಕಂಡು ಅದನ್ನು ತನ್ನ ಪ್ರೀತಿಯ 'ವಿಜಯನಾರಸಿಂಹ' ವೆಂಬ ಕತ್ತಿಯಿಂದ ಒಂದೇ ಏಟಿಗೆ ಕಡಿಮು ಸೀಳು ಮಾಡಿದನು ಮುಂದ, ತುರುಗದೇರಾಟ, ಗಜಾರೋಹಣ, ಭಲ್ಲ, ಬಾಕು, ಕಠಾರಿ ಮುಂತಾದ ಶಸ್ತ್ರಪ್ರಯೋಗ ಇವುಗಳಲ್ಲಿ ಅವನು ಅಂಗವಣೆಯನ್ನು ಕಲಿತನು

ನರಸರಾಜನ ತಂದೆಯು ರಾಜಸನ್ಯಾಸವನ್ನು ತಗೆದುಕೊಂಡದುದರಿಂದ, ರಾಜ್ಯವು ನರಸರಾಜನ ಚಿಗಪ್ಪನ ಸಂತತಿಯ ಕಡೆಗೆ ಹೋಗಿತ್ತು. ಆ ವಂಶದಲ್ಲಿಯ ಇಮ್ಮಡಿರಾಜನೆಂಬ ೨೧ ವಯಸ್ಸಿನ ಅರಸನು ವಿಷ ಪ್ರಯೋಗದಿಂದ ಕೊಲ್ಲಲ್ಪಟ್ಟುದುದರಿಂದ ಆತನ ಹೆಂಡತಿಯು ನರಸರಾಜನನ್ನು ದತ್ತಕ ತೆಗೆದುಕೊಂಡಳು ಆಗ, ಅರಸೊತ್ತಿಗೆಯು ನರಸ ರಾಜನಿಗೆ ಪ್ರಾಪ್ತವಾಯಿತು ದೇಶದಲ್ಲಿ, ಮುಸಲ್ಮಾನರ ಪೀಡೆಯಿಂದ ಜನರೆಲ್ಲರೂ ಅತ್ಯಂತ ಅಸಂತುಷ್ಟರಾಗಿದ್ದರು ಮುಸಲ್ಮಾನರು ಸುಜನರನ್ನು ಹಿಂಡಿ ಹಿಳಿದು ಬಹಳ ಗಜಬಜ ಮಾಡಿದರು, ಗೋವುಗಳನ್ನು ಸದೆಬಡೆದು, ದೇವತಾ ಶಿಲೆಗಳನ್ನೊಡೆದು, ಪಾವನ ಸಾಧ್ವಿಯರನ್ನು ಭಂಗಕ್ಕೆ ತಂದು ಹಾವಳಿಯನ್ನು ಮಾಡಿದರು ಇಂಥ ಭಯಂಕರ ಪರಿಸ್ಥಿತಿಯಲ್ಲಿ ನರಸರಾಜನು ಪಟ್ಟವೇರಿದನು ಮುಸಲ್ಮಾನರನ್ನು ಬಗ್ಗುಬಡೆಯುವುದೇ ಆತನ ಮೊದಲನೆಯ ಕರ್ತವ್ಯವಾಯಿತು ಹಾಗೆ ಮಾಡುವುದಕ್ಕೆ ಆತನಿಗೆ ಅನಾಯಾಸವಾಗಿ ಒಂದು ಸಂಧಿಯೂ ದೊರಯಿತು ಗುರಿಕಾರ ಚನ್ನಯ್ಯನೆಂಬವನೊಬ್ಬನು ಮೈಸೂರ ದೇಶದಿಂದ ಒಡಿಹೋಗಿ, ವಿಜಾಪುರದ ಪಾದಶಹನ ಆಶ್ರಯದಲ್ಲಿ ನಿಂತು, ಇನ್ನೂರು ಕುದುರೆಗಳಿಗೆ ಅಧಿಪತಿಯಾಗಿದ್ದನು ಆತನು ಮುಸಲ್ಮಾನರು ಶ್ರೀರಂಗ ಪಟ್ಟಣವನ್ನು ಮುತ್ತಬೇಕೆಂದು ಪಾದಶಹನ ಕಿವಿಯೂದಿದನು ಪಾದಶಹನು ಅದಕ್ಕೆ ಸಮ್ಮತಿಸಿ, ತನ್ನ ಸರದಾರರೊಳಗೆ ಅತ್ಯಂತ ಶೂರನಾದ ರಣದುಲ್ಲಾಖಾನನನ್ನು ಸೈನ್ಯದೊಂದಿಗೆ ದಕ್ಷಿಣಕ್ಕೆ ಕಳುಹಿದನು ಆತನು ಒಡನೆ ಇಕ್ಕೇರಿಯನ್ನು ಸೆಳೆದು, ತುರುಕರ ಪಡೆಯನ್ನು ಶ್ರೀರಂಗ ಪಟ್ಟಣದ ಮೇಲೆ ಸಾಗಿಸಿದನು ರಣದುಲ್ಲಾಖಾನನ ಪಡೆಯು ರೌದ್ರಾವೇಶದಿಂದ ಪಟ್ಟಣ

ವನ್ನು ಮುತ್ತಿತು ಬಿರುದಿನ ಡಾಲ ರಾವುತರು ಕುಣಿಯುವ ಕುದುರೆಗಳ
ನ್ನೇರಿ ಬಿಂಕದಿಂದ ಕೋಟೆಯನ್ನು ಲಗ್ಗೆ ಇಟ್ಟರು ಆತನ ಕೈಗತ್ತಿಯ
ಬವರಿಗರು ದುರ್ಗದಾಳ್ವರಿಯ ಮೇಲ ತುಡುಗಿನಿಂದೇರಲಿಕ್ಕೆ ಯತ್ನಿಸಿ
ದರು, ಬಳಸಿದ ತಳಿಯ ಮುರಿದು ಕೋಟೆಯ ಮೇರುವೆಗಳಿಗೆ ಕಿಚ್ಚನ್ನಿಕ್ಕಿ
ದರು ಆ ವಳ್ಳುರಿಯು ಮುತ್ತಿ ಮುಳಿದು ಸುತ್ತಲಿನ ಬನವನ್ನು ಸುಟ್ಟಿತು
ಆಗ, ಚಲದಂಕಮಲ್ಲನಾದ ಕಂಠೀರವ ನರಸರಾಜನು ಕಣ್ಗಿಡಿಗಳನ್ನು
ಸೂಸುತ್ತ, ಪುರವನ್ನೊತ್ತರಿಸಿ ಮುತ್ತಿಗೆಯನ್ನಿಕ್ಕಿ ಸೆಳೆಯಲು ಬಂದ ರಣ
ದುಲ್ಲಾಖಾನನ ಸೈನ್ಯದೊಂದಿಗೆ ಪ್ರಬಲ ಪರಾಕ್ರಮದಿಂದ ಕಾದಿದನು.
ಬರಸಿಡಿಲಿನಂತ ಆತನ ಸೈನ್ಯದ ಮೇಲೆ ಎರಗಿ ಬಿದ್ದು, ಮುಂಚೂಳಿಯ
ಕಾಳಗವಲ್ಲಿ, ಮಾರ್ಬಲವನ್ನು ಹೊಕ್ಕು ಅದನ್ನು ಕುಟ್ಟಿ ಕೋಲಾಹಲ
ವನ್ನಬ್ಬಿಸಿದನು ಆತನ ಸೈನಿಕರು ದುರಗಲಿತನದಿಂದ ಹೋರಾಡಿ,
ಕೋಟೆಯ ತೆನಗೆ ತುಡುಗಿನಿಂದ ಏರಿಬರುವ ತುಡುಗಣಿ ತುರುಕರ ಸೈನ್ಯ
ವನ್ನು ತರಿದು ತೂರಿದರು ಕೆಲವರನ್ನು ಸೀಕರಿಯಾಗಿ ಉದುಳಿಸಿದರು
ಮುಸಲ್ಮಾನರು ತಲೆಹರಿಗೆಗಳನ್ನೊಡ್ಡಿಕೊಳ್ಳುತ್ತ, ಅಲಗಿನ ಗಾಯಗಳನ್ನೆ
ಣಿಸದ, ಮೇಲಕ್ಕೇರಿ ಬಂದು ಕೋಟೆಯನ್ನು ಕೈವಶಮಾಡಿಕೊಳ್ಳುವುದಕ್ಕೆ
ವಿಶ್ವಪ್ರಯತ್ನ ಮಾಡಿದರು ಎಷ್ಟು ಉರುಬಿನಿಂದ ಕಾದಿದರೂ ಅದು
ವಶವಾಗಲಿಲ್ಲ ಆಗ, ರಣದುಲ್ಲಾಖಾನನ ಸೈನ್ಯದ ಧೈರ್ಯವು ಕರ
ಗಿತು, ಪೌರುಷವು ಬತ್ತಿತು ನರಸರಾಜನ ಸೈನ್ಯದಲ್ಲಿಯ ಬಿರುದಿನ
ಹೊಂತಕಾರಿಗಳು ಉಬ್ಬುಗುದುರೆಗಳ ಸಾಲಮೋಹರದಲ್ಲಿ ಹೊಕ್ಕು ಉರ
ವಣಿಸಿದರು ಎತ್ತುಗಲ್ಲು, ಏರುಗಲ್ಲು, ಕವಣೆಗಲ್ಲು, ಅರೆಗಲ್ಲು ಮುಂತಾ
ದವುಗಳಿಂದ ಕೋಟೆಯ ಮೇಲಿದ್ದವರು ಕೆಳಗಿದ್ದ ಮುಸಲ್ಮಾನರನ್ನು ತೆರ
ಪಿಲ್ಲದೆ ಕೊಂದರು ಮೊನೆಗಾರರು ಅರಿಬಲದ ಮೊನೆಮುರಿದರು.
ಕಗ್ಗೊಲೆಯ ಕಾಳಗಕ್ಕೆ ಪ್ರಾರಂಭವಾಯಿತು ಮುಸಲ್ಮಾನರನ್ನು ಹಿಂದು
ಗಳು ಸಿಕ್ಕಸಿಕ್ಕಲ್ಲಿ, ತರಿದು ತುಂಡರಿಸಿ ತೂರಿದರು ತೊರೆಯುತ್ತ ಮೊರೆ
ಯುತ್ತ, ರಕ್ತವನ್ನು ಸುರಿಸುತ್ತ ಮುಸಲ್ಮಾನ ಸೈನಿಕರು ದಿಕ್ಕಾಪಾಲಾಗಿ ಓಡಿ
ದರು ಅನೇಕರು ಉರುಳುತ್ತ, ನರಳುತ್ತ, ತರಳುತ್ತ, ಶತ್ರುಗಳ ಕಾಲುಗ

ಳಲ್ಲಿ ಬಿದ್ದರು  ನರಸರಾಜನ ಈ ಅಸಮಾನವಾದ ಪರಾಕ್ರಮದ ಆಯತೆ
ವನ್ನು ನೋಡಿ, ರಣದುಲ್ಲಾಖಾನನ ಪಂಥಪಾಡುಗಳೆಲ್ಲವೂ ಹೇಳಹೆಸರಿಲ್ಲದೆ
ಹೋದುವು. ನರಸರಾಜನ ಸೈನ್ಯವು ಆಗಸಕ್ಕೆ ಅಡರುವ ತೇಜಿಗಳನ್ನೂ
ರಣಗಲಿಯಾನೆಗಳನ್ನು ತೆಗೆದುಕೊಂಡು, ಅರಿಸೈನ್ಯವನ್ನು ಜಡಿದಟ್ಟಿ ಕಣ್ಗೆಡಿ
ಸಿತು. ಆಗ ರಣದುಲ್ಲಾಖಾನನ ಮಬ್ಬು ಅಡಗಿತು  ಆತನು ನರಸ
ರಾಜನಿಗೆ ಮೊರೆಹೊಕ್ಕು ಸಂಧಾನವನ್ನು ಮಾಡಿಕೊಂಡನು  ಈ ರೀತಿ
ಯಾಗಿ, ಪರಬಲಶಾರ್ದೂಲನಾದ ರಣಧೀರ ಕಂಠೀರವ ನರಸನು ಮುಸ
ಲ್ಮಾನರ ಗರ್ವವನ್ನು ಭಂಗಿಸಿ, ಕರ್ನಾಟಕ ಸಿಂಹಾಸನದ ಗೌರವವನ್ನು
ದೃಢಪಡಿಸಿದನು  ಆತನು ೧೬೪೧ ರಿಂದ ೧೬೫೫ರ ವರೆಗೆ ದಿಗ್ವಿಜಯ
ವನ್ನು ಕೈಕೊಂಡು, ಅನೇಕ ಪಾಳಯಗಾರರನ್ನು ಮುರಿದು, ರಾಜ್ಯವನ್ನು
ವಿಸ್ತರಿಸಿದನು  ಬೆಟ್ಟದಪುರ, ಕುಣಿಗಲ್ಲು, ಧಣಾಯಕನ ಕೋಟೆ, ಸತ್ಯ
ಮಂಗಲ ಮುಂತಾದವುಗಳೆಲ್ಲವೂ ಆತನ ಕಾಲದಲ್ಲಿಯೇ ಮೈಸೂರಿಗೆ
ಸೇರಿದವು

ಶೂರರ ಶೌರ್ಯವನ್ನು ನೋಡಿ ಶೂರರಿಗೆ ಆನಂದವಾದರೆ ಹೇಡಿ
ಗಳಿಗೆ ದುಃಖವಾಗುತ್ತದೆ  ತಿರುಚಿನಾಪಲ್ಲಿಯ ಅರಸನು ಇಂತಹ
ಹೇಡಿಯು  ಆತನು ನರಸರಾಜನ ಅತುಲ ಪರಾಕ್ರಮವನ್ನು ಕೇಳಿ,
ಹೊಟ್ಟೆಯಲ್ಲಿ ಉರಿಯಲಾರಂಭಿಸಿದನು  ಆದರೆ, ಆ ಪುರುಷಸಿಂಹನನ್ನು
ಇದಿರಿಸುವ ಧೈರ್ಯವು ಆತನಿಗೆಲ್ಲಿ? ನರಸರಾಜನನ್ನು ಗುಪ್ತರೀತಿಯಾಗಿ
ಕೊಲ್ಲಿಸುವುದಕ್ಕೆ ಆತನು ಇಪ್ಪತ್ತೈದು ಜಟ್ಟಿಗಳನ್ನು ವೇಷಾಂತರಗಳಿಂದ
ಶ್ರೀರಂಗಪಟ್ಟಣಕ್ಕೆ ಕಳುಹಿದನು  ಅವರು ಜಲಮಾರ್ಗದಿಂದ ಕನ್ನ
ಕೊರೆದು, ಅರಸನ ಅಂತಃಪುರವನ್ನು ಹೊಕ್ಕು, ಅಲ್ಲಿಯ ಕಂಭಗಳ ಹಿಂದೆ
ಅಡಗಿಕೊಂಡು ನಿಂತುಕೊಂಡು, ಹೊತ್ತು ಸಾಧಿಸಿ ನರಸರಾಜನನ್ನು ಸದ್ದಿ
ಲ್ಲದೆ ಕೊಂದು ಬಿಡುವ ಹವಣಿಕೆಯಲ್ಲಿದ್ದರು  ಅಷ್ಟರಲ್ಲಿ, ನರಸರಾಜನಿಗೆ
ಅವರ ಸುಳಿವು ತಿಳಿಯಿತು  ಕೂಡಲೆ, ಆತನು ತನ್ನ ವಿಜಯನಾರಸಿಂಹ ವೆಂ
ಬ ಕತ್ತಿಯನ್ನು ಹಿರಿದು, ಕೊಲೆಗಡಕರ ಮೇಲೆ ಏರಿಹೋದನು  ಅವರೆಲ್ಲರೂ
ಒಟ್ಟಾಗಿ ಆತನ ಮೇಲೆ ಬಿದ್ದು ಆತನನ್ನು ಕತ್ತರಿಸಿ ಒಗೆಯುವುದಕೆ

ಪ್ರಯತ್ನಪಟ್ಟರು. ಆದರೆ ನರಸರಾಜನು ಕೈಚಳಕದಿಂದ ಅವರಲ್ಲಿ ಅನೇಕರನ್ನು ಯಮಸದನಕ್ಕೆ ಅಟ್ಟಿ, ಮಿಕ್ಕವರನ್ನು ಪಾದಾಕ್ರಾಂತವಾಗಿ ಮಾಡಿಕೊಂಡನು. ಈ ಸುದ್ದಿಯನ್ನು ತಿರುಚಿನಾಪಲ್ಲಿಯ ಹೇಡಿ ಅರಸಿನಿಗೆ ತಿಳುಹುವುದಕ್ಕೆ ಅವರನ್ನು ಹಿಂದಕ್ಕಟ್ಟಿದನು

ಈ ರೀತಿಯಾಗಿ, ಕಂಠೀರವ ನರಸರಾಜನು ಅನೇಕ ಸಂದರ್ಭಗಳಲ್ಲಿ ತನ್ನ ಶೌರ್ಯವನ್ನು ತೋರ್ಪಡಿಸಿ, ಮುಸಲ್ಮಾನರ ಸೊಕ್ಕುಮುರಿದು ಪಡಗರದಿಂದ ಆಳಿ ಮಡಿದನು.



### ಕದನಪ್ರಚಂಡನಾದ

# ಮತ್ತಿ ತಿಮ್ಮಣ್ಣನಾಯಕ

---

## (೧೫೬೭-೧೫೮೭)

ಪಾಳಯಗಾರರು ಕರ್ನಾಟಕದಲ್ಲಿ ನಲೆಸಿದುದು ೧೩ ನೆಯ ಶತಮಾನಕ್ಕ ಮೊದಲು ವಿಶೇಷವಾಗಿ ಅವರು ಬೇಡರ ಜಾತಿಗೆ ಸೇರಿದವರು ಇವರ ಶೌರ್ಯವನ್ನು ಕಂಡೆ ಮುಸಲ್ಮಾನರು ಇವರನ್ನು ಅಂಜಿಕೆಯಿಲ್ಲದವರೆಂದು ಕರೆದರು ಇವರಲ್ಲಿ ಗುಮ್ಮನಾಯಕವಂಶ ಮುಂಚಿನದು. ವಿಜಯನಗರದ ಸ್ಥಾಪನೆಯಾದ ಬಳಿಕ ೧ನೆಯ ಬುಕ್ಕರಾಯನು ಗುಮ್ಮನಾಯಕನ ಮನೆತನದವರನ್ನು ತನ್ನ ಸಾಮ್ರಾಜ್ಯದ ಅಧೀನನಾಯಕರನ್ನಾಗಿ ಮಾಡಿಕೊಂಡನು ವಿಜಯನಗರದ ರಾಯರಿಗೆ ಬಿಕ್ಕಟ್ಟಿನ ಪ್ರಸಂಗ ಒದಗಿದಾಗ ಇವರ ಸಹಾಯವೂ ಬೇಕಾಗುತ್ತಿತ್ತು ಆಗ ಈ ವೀರನಾಯಕರು ತಮ್ಮ ಸೈನ್ಯವನ್ನು ಕಟ್ಟಿಕೊಂಡುಹೋಗಿ ಯುದ್ಧ ಮಾಡುತ್ತಿದ್ದರು ಹೀಗೆ ಸಹಾಯಮಾಡುವುದಕ್ಕೂ ವಿಶೇಷವಾಗಿ ತಮ್ಮ ಸತ್ವ ಸಂರಕ್ಷಣೆಗೂ ಹೊಸ ರಾಜ್ಯಗಳನ್ನು ಅಂಗಯ್ಗಳವಡಿಸಿಕೊಳ್ಳುವುದಕ್ಕೂ ಈ ನಾಯಕರು ತಮ್ಮ ದಂಡನ್ನು ಯಾವಾಗಲೂ ಅತ್ತಿಂದಿತ್ತ ಒಯ್ಯಬೇಕಾಗುತ್ತಿತ್ತು ಹೀಗೆ ಪರಿಭ್ರಮಿಸುತ್ತಿರುವ ಪಡೆಗೆ ಪಾಳಯವೆಂದೂ ಅದರ ನಾಯಕರಿಗೆ ಪಾಳಯಗಾರರೆಂದೂ ಹೆಸರು ಈ ಪಾಳೆಯಗಾರರ ಪೂರ್ವಜರು ವಿಜಯನಗರದ ರಾಜ್ಯಾರಂಭಕ್ಕೆ ಮುಂಚೆಯೇ ಇಲ್ಲಿ ಬೀಡು ಬಿಟ್ಟಿದ್ದರೂ ಕರ್ನಾಟಕ ಸಿಂಹಾಸನ ಸ್ಥಾಪನೆಯಾದ ಬಳಿಕವೇ ಪಾಳಯಗಾರರೆಂಬ ಹೆಸರು ಪ್ರಚಾರಕ್ಕೆ ಬಂದಿತು ಗುಮ್ಮನಾಯಕವಂಶದ

ಪಾಳೆಯಗಾರರ ಮಧ್ಯಕಾಲದಲ್ಲಿ ಇನ್ನೊಂದು ಪಾಳೆಯಗಾರರ ಮನೆತನವು ಪ್ರಬಲವಾಯಿತು ಅದಂದರೆ ಮತ್ತಿ ಪಾಳೆಯಗಾರರದು ನಮ್ಮ ಕಥಾನಾಯಕನಾದ ಮತ್ತಿಯ ತಿಮ್ಮಣ್ಣನಾಯಕನೆಂಬ ಕೆಚ್ಚೆದೆಯ ಕಟ್ಟಾಳು ಈ ಮತ್ತಿ ಪಾಳೆಯಗಾರ ವಂಶದ ಮೂಲಪುರುಷ

ವಾಲ್ಮೀಕಿ ಗೋತ್ರದವರೆಂದು ಹೇಳಲ್ಪಡುವ ಕಾಮಗೇತಿ ವಂಶದಲ್ಲಿ ಹುಟ್ಟಿದ ಸಬ್ಬಗಡಿ ಓಬನಾಯಕ, ಜಡನಿನಾಯಕ, ಬುಳ್ಳನಾಯಕ ಎಂಬ ಸಹೋದರರು ಉತ್ತರದಿಂದ ಬಂದರು ತಮ್ಮ ಸಂಗಡ ಪರಿವಾರವೂ ಮನದೇವರಾದ ಅಹೋಬಲ ನರಸಿಂಹಮೂರ್ತಿಯ ಪೆಟ್ಟಿಗೆ, ತುರುಗಳು, ಕುರಿಗಳು, ಕೊಲ್ಲಾರಿ ಬಂಡಿಗಳು ಮುಂತಾದ ಕಂಪಳ ( ಸರಂಜಾಮು ) ವನ್ನು ಅವರು ಹೊರಡಿಸಿದ್ದರು ಹಾದಿಯಲ್ಲಿ ವಿರುಪಾಕ್ಷೇಶ್ವರನನ್ನು ಸಂದರ್ಶಿಸಿ ಹಂಪೆಯ ಸೊಬಗನ್ನು ನೋಡಿಕೊಂಡು ಮುಂದ ಸಾಗಿದರು ಆಗ ಆನಗೊಂದಿಯ, ವಿರುಪಾಕ್ಷೇಶ್ವರನ ಪೂಜಾರ್ಯರಾದ ಕರಿಜೋಯಿಸ, ವಿರೂಪಾಕ್ಷ ಜೋಯಿಸ ಎಂಬಿಬ್ಬರು ಹುಡುಗರು ಈ ನಾಡ ತಳವಾರರ ಬೆನ್ನು ಹತ್ತಿ ಬಂದರು ಆ ಮೂವರು ನಾಯಕರೂ ಬಿಳಿಚೋಡಿನ ಬಳಿಯಲ್ಲಿ ರೊಪ್ಪ (Fold for sheep ?) ಹಾಕಿಕೊಂಡಿದ್ದು ಮೂರು ತಿಂಗಳ ಕಾಲ ಕಳೆದರು ಆ ಬಿಳಿಚೋಡಿನ ಜೋಯಿಸರಿಗೆ ಮಕ್ಕಳಿಲ್ಲದ್ದರಿಂದ ಈ ನಾಯಕರ ಹತ್ತಿರವಿದ್ದ ಇಬ್ಬರು ಪೂಜಾರ್ಯರ ಹುಡುಗರನ್ನು ಭೋಗಪಟ್ಟ ಬರಸಿಕೊಟ್ಟು ತಮ್ಮ ತರುವಾಯಕ್ಕಾಗಿ ನಿಯಮಿಸಿಕೊಂಡರು ಆ ನಾಯಕರು ಮುಂದೆ ನೀರುತಡಿ ಎಂಬ ಊರ ನೆರೆಯಲ್ಲಿ ತಂಗಿದರು ಅಲ್ಲಿಯೊಂದು ಗುಡಿಯನ್ನು ಕಟ್ಟಿಸಿ ಕುಲದೇವತೆಯನ್ನು ಅದರಲ್ಲಿ ಸ್ಥಾಪನ ಮಾಡಿದರು ಬರುಬರುತ್ತ ಅವರು ಸುತ್ತುಮುತ್ತಲಿನ ಹಳ್ಳಿಗಳಲ್ಲಿದ್ದುಕೊಂಡು ಆ ದೇವರಿಗೆ ನಡೆದುಕೊಳ್ಳುತ್ತಿದ್ದರು ಇಷ್ಟಲ್ಲ ಈ ತಿಮ್ಮಣ್ಣನಾಯಕನ ಪೂರ್ವವೃತ್ತವಾಯಿತು ಆ ಮೂವರು ನಾಡ ತಳವಾರರಲ್ಲಿ ಹಿರಿಯನಾದ ಸಬ್ಬಗಡಿ ಓಬನಾಯಕನೇ ಈತನ ತಂದ

ಈ ತಿಮ್ಮಣ್ಣನಾಯಕನು ಮತ್ತಿಗ್ರಾಮದಲ್ಲಿ ನಿಂತನು, ಆದುದರಿಂದ ಈತನಿಗೆ ಮತ್ತಿ ತಿಮ್ಮಣ್ಣನಾಯಕನೆಂದು ಹೆಸರಾಯಿತು ಇವನ

ಕಕ್ಕ ಜಡಕಲ್ಲುನಾಯಕ (ಜಡವಿನಾಯಕ) ನ ಮಗ ಹಿರೀಹನುಮನಾಯಕನು ಸಾಗಲೆ ಗ್ರಾಮದಲ್ಲಿ ಇದ್ದನು, ಇನ್ನೊಬ್ಬ ಕಕ್ಕ ಬುಳ್ಳನಾಯಕನ ಮಕ್ಕಳು ಚಿಕ್ಕಹನುಮನಾಯಕ ಓಬಣ್ಣನಾಯಕರು ಬಿಳಿಜೋಡಿನಲ್ಲಿ ವಾಸಮಾಡಿದರು ತಿಮ್ಮಣ್ಣನಾಯಕನು ತನ್ನ ಸುತ್ತುಮುತ್ತಲಿನ ನಾಡಿನಲ್ಲಿ ಪ್ರಬಲನಾಗುತ್ತ ನಡೆದನು ಆಗ ವಿಜಯನಗರದ ಅವನತಿಗೆ ಆರಂಭವಾಗತೊಡಗಿತ್ತು ಮುಸಲ್ಮಾನರೆಲ್ಲ ಒಟ್ಟು ಸೇರಿ ಕರ್ನಾಟಕ ಸಿಂಹಾಸನವನ್ನು ಕಿತ್ತೊಗೆಯಲು ಹವಣಿಸುತ್ತಿದ್ದರು ಈ ಕೋಲಾಹಲದಲ್ಲಿ ತಮಗೆ ಆಸರವಾಗಿರಬೇಕೆಂದು, ವಿಜಯನಗರದ ರಾಯರು ತಮ್ಮ ಸಾಮ್ರಾಜ್ಯದಲ್ಲಿಯ ವೀರರನ್ನು ತಮ್ಮ ಮಿತ್ರರನ್ನಾಗಿ ಮಾಡಿಕೊಳ್ಳುತ್ತಿದ್ದರು ಆ ಸಮಯದಲ್ಲಿ ವಿಜಯನಗರದ ಮುಖ್ಯ ಕಾರಭಾರಿಯಾಗಿದ್ದ, ರಾಜಸಂತತಿಯ ಸಾಳ್ವ ನರಸಿಂಗರಾಯನ ದೃಷ್ಟಿ ಈ ಮತ್ತಿ ತಿಮ್ಮಣ್ಣನ ಕಡೆಗೆ ಹೊರಳಿತು ತಮ್ಮ ಸಾಮ್ರಾಜ್ಯಕ್ಕೆ ಈತನಿಂದ ವಿಶೇಷ ಸಹಾಯವಾಗಬಹುದೆಂದು ಈತನ ಧೀರವೃತ್ತಿ ವೀರಕಳೆಗಳಿಂದ ಗುರುತು ಹಿಡಿದು ಹೊಳಲಕೆರೆಯ ನಾಯಕತನವನ್ನು ಈ ತಿಮ್ಮಣ್ಣನಾಯಕನಿಗೆ ಕೊಡಿಸಿದನು ಈತನು ವಿಜಯನಗರದ ರಾಯರ ವಿಶೇಷ ಗೌರವಕ್ಕೆ ಪಾತ್ರನಾಗಿ ಹಿರಿಯೂರ ನಾಯಕತನವನ್ನೂ ಕೆಲದಿನಗಳಲ್ಲಿ ಪಡೆದುಕೊಂಡನು ಚಿಲ್ಲಹಳ್ಳಿಯ ಓದುವ ತಿಮ್ಮವ್ವ ಎಂಬವಳು ಈ ತಿಮ್ಮಣ್ಣನಾಯಕನನ್ನು ಮದುವೆಯಾದಳು

ಮುಂದೆ ನಾಲ್ಕು ವರ್ಷಗಳವರೆಗೆ ತಿಮ್ಮಣ್ಣನಾಯಕನು ರಂಗಪಟ್ಟಣವನ್ನು ಕಟ್ಟಿಸಿದನು ಆದರೆ ಎರಡು ವರುಷಗಳಲ್ಲಿಯೇ ತರೀಕೆರೆಯ ಪೂವಳ ಹನುಮಪ್ಪನು ಐದು ಗ್ರಾಮಗಳನ್ನು ತೆಗೆದುಕೊಂಡು, ಹೊಸದಾಗಿ ಕಟ್ಟಿದ ಆ ರಂಗಪಟ್ಟಣಕ್ಕೆ ಲಗ್ಗೆ ಹತ್ತಿದನು ಇದನ್ನು ಕೇಳಿದೊಡನೆ ತಿಮ್ಮಣ್ಣನಾಯಕನು ಭುಗಿಭುಗಿಲೆಂದು ಸಿಟ್ಟಾಗಿ ಕಟ್ಟಿರುಳಲ್ಲಿಯೇ ಪಾಳಯವನ್ನೆತ್ತಿಕೊಂಡು ನೂಲೋಕಣಿವೆಯಲ್ಲಿ ಹಾಯ್ದು ದುರ್ಗದ ಗುಡ್ಡಕ್ಕೆ ಬಂದನು ಅಷ್ಟರಲ್ಲಿ ವೈರಿಗಳು ಅದನ್ನು ಸೂರೆಗೊಂಡು ಹಾಳುಮಾಡಿದ್ದರು. ಮುಂದೆ ೩೫ ವರುಷಗಳ ಬಳಿಕ ತಿಮ್ಮಣ್ಣನಾಯಕನ ಮೊಮ್ಮಗನು ಮತ್ತೆ ಅದನ್ನು ಕಟ್ಟಿಸಿದನು. ರಂಗಪಟ್ಟಣವು

ಮುಗ್ಗಿದ ಬಳಿಕ ತಿಮ್ಮಣ್ಣನಾಯಕನು ಮೇಲ್ದುರ್ಗದಲ್ಲಿಯೇ ನಿಂತನು. ಅಲ್ಲಿ ಆತನಿಗೆ ಸಿದ್ಧಪುರುಷರ ದರ್ಶನವಾಯಿತು ಸಳನಿಗೆ ಜಿನಮುನಿಯೂ ಹುಕ್ಕನಿಗೆ ವಿದ್ಯಾರಣ್ಯರೂ ಮಾರ್ಗದರ್ಶಕರಾದಂತೆ ತಿಮ್ಮನಾಯಕನಿಗೆ ಆ ಸಿದ್ಧಪುರುಷರು ಹಾದಿ ತೋರ್ರಿಸಿದರು 'ಅರಿತು ನಡೆದರೆ ಆರುಪಟ್ಟು ಮರೆತು ನಡೆದರೆ ಮೂರುಪಟ್ಟು' ಎಂದು ಅವರು ಉಪದೇಶಿಸಿದರು. ತಿಮ್ಮಣ್ಣನಾಯಕನು ಆ ಸಿದ್ಧರ ಅಪ್ಪಣೆಯಂತೆ ಅಲ್ಲಿಯೇ ಇದ್ದು ಮೇಲ್ದುರ್ಗದ ಕೋಟೆಯನ್ನೂ ಅರಮನೆಯನ್ನೂ ಕಟ್ಟಿಸಿದನು

ತಿಮ್ಮಣ್ಣನಾಯಕನು ಇನ್ನೂ ಪ್ರೌಢಾವಸ್ಥೆಯಲ್ಲಿ ಕಾಲಿಕ್ಕುತ್ತಿರುವಾಗಲೇ ತಾಳೀಕೋಟೆಯ ಕಾಳಗವಾಗಿ ವಿಜಯನಗರದ ಸಾಮ್ರಾಜ್ಯವು ನುಚ್ಚುನುರಿಯಾಯಿತು ಆಗ ತಿಮ್ಮಣ್ಣನಾಯಕನ ತಂದೆಯವರು ಈ ಕಡೆ ಬಂದು ೮-೯ ವರುಷಗಳು ಮಾತ್ರವೇ ಆಗಿದ್ದವು ಈತನ ಪಾಳಯವು ಚಿಕ್ಕದಾಗಿದ್ದುದರಿಂದ ಈತನಿಗೆ ಯುದ್ಧಕ್ಕೆ ಹೋಗುವ ಪ್ರಸಂಗ ಬರಲಿಲ್ಲ ಜನರ ಕಣ್ಣಿಗೆ ಕಾಣುವಷ್ಟು ತಿಮ್ಮಣ್ಣನಾಯಕನು ಬಲಿತುದಂದರ ವಿಜಯನಗರವು ನಷ್ಟವಾದ ಬಳಿಕ ಆಗಲೂ ವಿಜಯನಗರದ ಅರಸು ಮನೆತನದವರು ಬೇರೆ ಬೇರೆ ಕಡೆಗೆ ರಾಜಧಾನಿಗಳನ್ನು ಮಾಡಿಕೊಂಡು ಆಳುತ್ತಲೇ ಇದ್ದರು ದಿನದಿನಕ್ಕೆ ಸೊರಗುತ್ತ ನಡೆದ ವಿಜಯನಗರದವರು ಬೆಳೆಯುತ್ತ ನಡೆದ ತಿಮ್ಮಣ್ಣನಾಯಕನನ್ನು ಮೆಚ್ಚಿಸಿಕೊಳ್ಳಬೇಕಾಯಿತು ಅವರು ಅದಕ್ಕಾಗಿ ಚಿತ್ರದುರ್ಗ, ಮೇಲುದುರ್ಗಗಳ ನಾಯಕತ್ವವನ್ನು ತಿಮ್ಮಣ್ಣನಾಯಕನಿಗೆ ಕೊಟ್ಟರು ನಾಯಕನಿಗೆ ಆ ವಿರೂಪಾಕ್ಷಜೋಯಿಸನ ಮಗ ಪರಶುರಾಮಪ್ಪನು ಸರ್ವಾಧಿಕಾರಿಯಾದನು ಪರಶುರಾಮಪ್ಪನ ನಂಬಿಗೆಯ ವೃತ್ತಿಗೆ ಸಂತುಷ್ಟನಾದ ತಿಮ್ಮಣ್ಣನಾಯಕನು ಆತನ ಪರಂಪರೆಗೆಲ್ಲ "ಹರಿಯುದ ಹಚ್ಚಡ ಮುರಿಯದ ಒಡವೆ" ಆಗಬೇಕೆಂದು ಕೆಲವು ಹಳ್ಳಿಗಳ ಸೇನುಭೋಗತನವನ್ನು ಆತನಿಗೆ ಕೊಟ್ಟನು ಆ ಬಗ್ಗೆ ಶಿಖಾಮೊಹರು ರುಜುವಿನಿಂದ ಶಾಸನ ಬರೆದುಕೊಟ್ಟನು ಇದು ತಿಮ್ಮಣ್ಣನಾಯಕನ ಆಯುಷ್ಯದ ಆದಿಭಾಗದ ಚರಿತ್ರೆಯಾಯಿತು

ವಿಜಯನಗರದವರು ಈ ತಿಮ್ಮಣ್ಣನಾಯಕನಿಗೆ ಇಷ್ಟೊಂದು ಹೆಚ್ಚಳವನ್ನು ಕೊಟ್ಟುದು ಕೆಲವು ಕ್ಷುದ್ರರ ಹೊಟ್ಟೆಯಕಿಚ್ಚಿಗೆ ಕಾರಣವಾಯಿತು. ಅವರೆಲ್ಲ ರಾಯರ ಕಿವಿಯಲ್ಲಿ ಏನೇನು ಊದಿದರೋ ಏನೋ, ಇವನ ಮೇಲೆ ವಿಜಯನಗರದವರಿಗೆ ವೈಮನಸ್ಸು ಹುಟ್ಟಿತು ತಿಮ್ಮಣ್ಣನಾಯಕನನ್ನು ಅಡಗಿಸಬೇಕೆಂದು ವಿಜಯನಗರ ಸಂಸ್ಥಾನದವರು ವೀರ ಸಾಳ್ವ ನರಸಿಂಹರಾಯನನ್ನು ದೊಡ್ಡ ದಂಡಿನೊಡನೆ ಕಳುಹಿದರು ಆತನು ಬಿತ್ತರದಿಂದ ಬಂದು ದುರ್ಗವನ್ನು ಬಲವಾಗಿ ಸುತ್ತಿ ಮುತ್ತಿದನು ಅಸಹಾಯ ಶೂರನಾದ ತಿಮ್ಮನಾಯಕನು ಪ್ರತೀಕಾರಕ್ಕೆ ಕೂಡಲೆ ಸಿದ್ಧನಾದನು ಈ ಕದನಕ್ಕೆ ಮುಂಚೆಯೆ, ಮೊನಗಾರನಾದ ಈತನು ಪಟ್ಟ ಅನನ್ಯ ಸಾಹಸವೂ ಸಾಹಸಕ್ಕಿಂತ ಮಿಗಿಲಾಗಿ ತೋರ್ಪಡಿಸಿದ ಮನೋದಾರ್ಢ್ಯತೆಯೂ ಜನರನ್ನು ಬೆರಗುಗೊಳಿಸುವಂತಿವೆ ನರಸಿಂಹರಾಯನ ದಂಡಾಳುಗಳೆಲ್ಲ ಮಲಗಿದ್ದ ಹೋಗಿದ್ದಾಗ ನಟ್ಟಿರುಳಿನಲ್ಲಿ ಈ ಗಂಡಾಳಾದ ತಿಮ್ಮಣ್ಣನಾಯಕನು ಆ ಬೀಡಿನೊಳಗೆ ಹೊಕ್ಕನು ಆತನು ಅರಸಗುದುರೆಯ ಕಣ್ಣಿಯನ್ನು ಬಿಚ್ಚಿ ಅದನ್ನು ಓಡಿಸಿಕೊಂಡು ಬರುವವನಿದ್ದನು ಸಪ್ಪಳಕ್ಕೆ ಲಾಯದವನಿಗೆ ಎಚ್ಚರವಾಗಿ ಆತನು ನಿದ್ದೆಗಣ್ಣಿನಲ್ಲಿ ಎದ್ದು ಕುದುರೆಯಕಡೆಗೆ ಬಂದನು ನಾಯಕನು ಕುಳಿತಲ್ಲಿಯೇ ಒರಗಿಕೊಂಡುಮೇಲೆ ಹುಲ್ಲನ್ನು ಮುಚ್ಚಿಕೊಂಡನು ಲಾಯದವನು ಅಲ್ಲಿಗೆ ಬಂದು ಕುದುರೆಯ ಜಗ್ಗಾಟದಿಂದ ಕಿತ್ತುಹೋಗಿರುವ ಗೂಟವನ್ನು ನೆಲದಲ್ಲಿ ಗಟ್ಟಿಯಾಗಿ ಬಡಿದು ಕುದುರೆಯನ್ನದಕ್ಕೆ ಮತ್ತೆ ಕಟ್ಟಿಹೋಗಿ ಮಲಗಿಕೊಂಡನು ಆ ಗೂಟವು ನಾಯಕನ ಬಲದ ಅಂಗಯ್ಯಲ್ಲಿ ನಾಟಿ ನಲದಲ್ಲಿ ಸೇರಿಕೊಂಡಿತ್ತು! ಆದರೆ ತಿಮ್ಮಣ್ಣನಾಯಕನು ಮಿಟ್ಟುಮಿಸಗಲಿಲ್ಲ, ಹಾಯ್ ಎನ್ನಲಿಲ್ಲ ತಿರುಗಿ ಕಾವಲುಗಾರನಿಗೆ ನಿದ್ರೆಹತ್ತುವವರೆಗೆ ಹಾಗೆ ಮಲಗಿದ್ದನು ಆ ಬಳಿಕ ತನ್ನ ಎಡಗಯ್ಯಿಂದ ಸೊಂಟದಲ್ಲಿರುವ ಕತ್ತಿಯನ್ನು ತೆಗೆದುಕೊಂಡು ಬಲದ ಮುಂಗಯ್ಯನ್ನು ಕೊಯ್ದುಹಾಕಿಬಿಟ್ಟನು ಆ ಮೊಂಡಗಯ್ಗೆ ಬಟ್ಟೆಯನ್ನು ಸುತ್ತಿಕೊಂಡು ಮತ್ತೆ ಆ ಕುದುರೆಯನ್ನು ಬಿಚ್ಚಿಕೊಂಡು ಅದರ ಮೇಲೇರಿ ಓಡಿಸುತ್ತ ದುರ್ಗಕ್ಕೆ ನಡೆದನು ಈ ಸಾಹಸ ಇಲ್ಲಿಗೇ ನಿಲ್ಲಲಿಲ್ಲ ನರಸಿಂಗರಾಯನ ಅರಸಾನೆಯನ್ನು ಮೂವುತರು ನೀರು

ಕುಡಿಸುವುದಕ್ಕೆ ಕೆರಗೆ ತಂದರು ಇದನ್ನು ಕಂಡು ಪಾಳಯಗಾರನು ಬಿಲ್ಲನ್ನು ಕಾಲಿನಲ್ಲಿ ಮೆಟ್ಟಿಹಿಡಿದು ಹೆದೆಗೆ ಅಂಬನ್ನೇರಿಸಿ ಆನೆಯ ಹಣೆಗೆ ಗುರಿಗಟ್ಟಿ ಎಡಗಯ್ಯಿಂದ ತುಯಿದು (ಎಳೆದು) ಬಿಟ್ಟನು ತನ್ನ ಭ್ರೂಮಧ್ಯಕ್ಕೆ ತಾಗಿದ ಒಂದೇ ಒಂದು ಬಾಣದ ಏಟಿನಿಂದ ಆನೆ ಕಿರ್ರನೆ ಕಿರಚಿಕೊಂಡು ಬಿದ್ದು ಪ್ರಾಣಬಿಟ್ಟಿತು ಇದರಿಂದ ನರಸಿಂಹರಾಯನು ಇನ್ನಷ್ಟು ರೇಗಿ ಮುತ್ತಿಗಯನ್ನು ಭದ್ರಪಡಿಸಿ ಲಗ್ಗೆಯಿಟ್ಟನು ಒಕ್ಕಯ್ಯವನಾದರೂ ತಿಮ್ಮಣ್ಣನಾಯಕನ ಪರಾಕ್ರಮ ಮುಕ್ಕಾಗಿರಲಿಲ್ಲ ಆತನು ಯುದ್ಧಕ್ಕೆ ಅಣಿಯಾದನು ಅವನೊಡನ ಸಾಯಲು ಸಿದ್ಧರಾದ ವೀರರು ಕಠಾರಿ ಬರ್ಜಿಗಳನ್ನೂ, ಅಂಬುಬಿಲ್ಲುಗಳನ್ನೂ, ಕರ್ನಾಟಕ ಕೋವಿ ಫಿರಂಗಿಗಳನ್ನೂ, ಹರಪನಹಳ್ಳಿಯ ಬಾಣಗಳನ್ನೂ ಸವ್ವರಿಸಿಕೊಂಡು ಯುದ್ಧಕಣಕ್ಕಿಳಿದರು. ಅಸಾಮಾನ್ಯ ಶೂರನಾದ ನರಸಿಂಹರಾಯನಿಗೂ ಕದನಪ್ರಚಂಡನಾದ ತಿಮ್ಮಣ್ಣನಾಯಕನಿಗೂ ಕಾಳಗಕ್ಕೆ ಮೊದಲಾಯಿತು. ಕರ್ನಾಟಕ ಕೋವಿಗಳೂ ತೋಪುಗಳೂ ದಢಬಢಲ್ಲನ ಹಾರಿ ನರಸಿಂಗರಾಯನ ಸೇನೆಯನ್ನು ಹಾರಿಸಿದವು ಕೋಟೆಯನ್ನು ನುಗ್ಗಬೇಕೆಂದು ಉರವಣೆಯಿಂದ, ಪಾಳಯಗಾರರನ್ನು ಬರ್ಚಿ ಕಠಾರಿಗಳಲ್ಲಿ ಇರಿದಿರಿದು ಒತ್ತಿ ಬರುತ್ತಿರುವ ಅರಿಬಲದಲ್ಲಿ ನಾಯಕನ ಕಡೆಯವರು ಹರಪನಹಳ್ಳಿಯ ಬಾಣಗಳನ್ನು ಉಪಯೋಗಿಸಿದರು ಅವುಗಳು ವೈರಿಸಮೂಹವನ್ನು ಅಲಗಿನಿಂದ ಚುಚ್ಚಿಯೂ ಮದ್ದಿನ ಉರಿಯಿಂದ ಸುಡುತ್ತಲೂ ರಣರಂಗದಲ್ಲಿ ವಿಶೇಷವಾಗಿ ಹಾವಳಿ ಮಾಡಿದವು ತಿಮ್ಮಣ್ಣನಾಯಕನು ನರಸಿಂಗರಾಯನ ಅರಸಗುದುರೆಯನ್ನೇರಿ ಬರ್ಚಿಯ ಯುದ್ಧವನ್ನು ಮಾಡಿದನು. ವಿಜಯನಗರದ ಸೇನ ತಲ್ಲಣಿಸಿ ಬೆಂಗೊಟ್ಟಿತು ನರಸಿಂಗರಾಯನ ಆಟೋಪವು ಕುಗ್ಗಿತು ಆತನು ಮೋರೆ ತಗ್ಗಿಸಿಕೊಂಡು ಹಿಂತಿರುಗಬೇಕಾಯಿತು ಅರಿರಾಜ ಮಾನಮರ್ದನನಾದ |ತಿಮ್ಮನಾಯಕನು ಜಯಶೀಲನಾದನು ಆದರೂ ಉಪ್ಪುಂಡ ಉಪಕಾರಕ್ಕಾಗಿ ಮತ್ತೂ ವಿಜಯನಗರದ ರಾಜರ ಅಧೀನನಾಗಿಯೇ ಇದ್ದನು

ತಿಮ್ಮಣ್ಣನಾಯಕನು ಕೈಯಿಕ್ಕಿದ ಕಾಳಗಗಳಲ್ಲಿ ಆತನಿಗೆ ಸೋಲೆಂಬುದಿಲ್ಲ ಆತನು ವಿಜಯನಗರದ ರಾಯರಿಗೆ ಕಲಬುರ್ಗಿಯ ಗೆಲಿದು ಕೊಟ್ಟನು. ಕಲಬುರ್ಗಿಯವರು ವಿಜಯನಗರದವರೊಡನೆ ಕಾಲುಕೆದರಿ ಜಗಳ ತೆಗೆದರು ಅವರ ಬಿಂಕವನ್ನು ಹಿಂಗಿಸುವುದಕ್ಕಾಗಿ ರಾಯರು ಸಾಳ್ವ ನರಸಿಂಗರಾಯನನ್ನು ಮಹಾಬಲದೊಡನೆ ಕಳುಹಿದರು ಆತನು ಬಂದು ಕಲಬುರ್ಗೆಗೆ ಲಗ್ಗೆಯಿಟ್ಟನು ಆ ಕೋಟೆಯೊಳಗಿನ ದಳಪತಿಯು ಒಳ್ಳೇ ಘಟಕನಾಗಿದ್ದನು ಇಬ್ಬರಲ್ಲಿಯೂ ಆರು ತಿಂಗಳವರೆಗೆ ಕಾದಾಟವಾಯಿತು. ನರಸಿಂಗರಾಯನ ದೋರ್ದಂಡಕ್ಕೆ ಅರಿಸೇನಾಧೀಶನ ದರ್ಪವು ಮಣಿಯಲಿಲ್ಲ ಕಲಬುರ್ಗೆಯ ಮೇಲೆ ತಮ್ಮವರ ಕೈ ಏನೂ ನಡೆಯದಿದ್ದುದನ್ನು ಕಂಡು ವಿಜಯನಗರದರಾಯರು ಚಿಂತಾಕ್ರಾಂತರಾದರು. ಅವರಿಗೆ ತಿಮ್ಮಣ್ಣನಾಯಕನ ತೋಳಾರ್ಪಿನ ನೆನಪಾಯಿತು "ನಿಮ್ಮ ಕೈಯನ್ನು ನೋಡಬೇಕೆಂದಿದ್ದೇವೆ ಕಲಬುರ್ಗೆಗೆ ದಾಳಿಯಿಟ್ಟು ಅದನ್ನು ತೆಗೆದುಕೊಳ್ಳಬೇಕು'' ಎಂದು ರಾಯರು ಆತನ ಕಡೆಗೆ ಬರದು ಕಳುಹಿಸಿದರು ತಿಮ್ಮಣ್ಣನಾಯಕನು ತನ್ನ ಪಾಳಯವನ್ನು ತೆಗೆದುಕೊಂಡು ಕಲಬುರ್ಗೆಯ ಮೇಲೆ ಸಾಗಿದನು ಸಾಳ್ವ ನರಸಿಂಗರಾಯನ ಮುತ್ತಿಗೆಯನ್ನು ತೆಗೆಯಿಸಿ ಅವನು ತನ್ನ ದಂಡಿನೊಡನೆ ಕೋಟೆಯಮೇಲೆ ಏರಿಹೋದನು. ತನ್ನ ಬಲವನ್ನು ಎರಡಾಗಿ ವಿಂಗಡಿಸಿದನು ಒಂದಕ್ಕೆ ತಾನು ಮುಂದಾಳು, ಇನ್ನೊಂದಕ್ಕೆ ಅಣ್ಣನಾದ ಓಬಳಣ್ಣ ಧುರೀಣ ೨೦೦೦ ಹತ್ತಿಯ ಅಂಡಿಗೆಗಳನ್ನು ಅಗಳತೆಗೆ ಹಾಕಿಸಿ ಎರಡು ನಿಟ್ಟಿನಿಂದ ಲಗ್ಗೆ ಹತ್ತಿದರು. ಕೋಟೆಯ ಮೇಲಿನ ತೋಪುಗಳು ಅದ್ಭುತವಾದ ಧ್ವನಿಯಿಂದ ಹಗೆಗಳ ಮೇಲೆ ಕೆಂಡವನ್ನು ಕಾರಿದವು ನಾಯಕನ ಪಾಳಯದವರ ಕೂರಂಬುಗಳು ಸುಯ್ಗುಟ್ಟುತ್ತ ಕಲಬುರ್ಗೆಯವರ ಎದೆಯನ್ನು ಚ್ಛಳಿಸಿದವು ತಿಮ್ಮಣ್ಣನಾಯಕನು ಬರಿ ಎಡಗಯ್ಯಿಂದಲೇ ಮಹಾಪರಾಕ್ರಮವನ್ನು ಪ್ರಕಟಿಸಿದನು ಕಲಬುರ್ಗೆಯವರ ಕೈಯಳವು ನಿಂತಿತು ಇವರ ಕೈ ಬಲವಾಯಿತು ೪-೫ ಗಳಿಗೆಯಲ್ಲಿ ತಿಮ್ಮಣ್ಣನಾಯಕನು ಕೋಟೆಯ ಬಾಗಿಲನ್ನು ತೆರೆದು ತುಳಿಲಾಳ್ಗಳೊಡನೆ ಒಳನುಗ್ಗಿದನು ಒಳಗೆ ಯುದ್ಧವು ಮತ್ತೂ ಮುಂದರಿಯಿತು ವೀರರ ಬಿಸಿನೆತ್ತರು ಮೊಣಕಾಲು ಮಟ್ಟ

ಹರಿದು ಬಾಗಿಲಿನಿಂದ ಕೆಳಕ್ಕೆ ಧುಮುಕುತ್ತಿತ್ತು ಕಲಬುರ್ಗೆಯವರ ಸೂಕ್ಕು ಅವರೊಡನೆ ತೇಲಿಹೋಯಿತು ಅವರು ಆಯುಧಗಳನ್ನು ಕೆಳಗಿರಿಸಿದರು ತಿಮ್ಮಣ್ಣನಾಯಕನು ಧರ್ಮಕಹಳೆಯನ್ನು ಹಿಡಿಸಿದನು ಕದನವು ನಿಂತಿತು ಈ ವಿಜಯವನ್ನು ಕೇಳಿ ರಾಯರಿಗೆ ಹಿಡಿಸಲಾರದಷ್ಟು ಆನಂದವಾಯಿತು. ಅವರು ಆತನನ್ನು ಕರೆಯಿಸಿಕೊಂಡು ಮೂರು ತಿಂಗಳವರಗೆ ಅರಮನೆಯಲ್ಲಿ ಆದರದಿಂದ ಇರಿಸಿಕೊಂಡಿದ್ದರು ತಿಮ್ಮಣ್ಣ ನಾಯಕನಿಗ ಚಿನ್ನದ ಮುಲಾಮಿನ ದೊಡ್ಡ ಶಂಖ ಚಕ್ರದ ಜೊತೆಯೊಂದನ್ನೂ, ಅಂದಳ ಮತ್ತು ಮೊಸಳೆಬಾಯಿ ಜೋಡೊಂದನ್ನೂ ಫಿರಂಗಿಯೊಂದನ್ನೂ ಸತ್ತಿಗೆಯೊಂದನ್ನೂ ಚಿನ್ನದ ಹಸ್ತವೊಂದನ್ನೂ ಹಗಲು ದೀವಟಿಗೆಯೊಂದನ್ನೂ ಅಮೂಲ್ಯವಾದ ಉಡುಗರೆಯನ್ನೂ ವಿಜಯನಗರದ ರಾಯರು ಮೆಚ್ಚಾಗಿಕೊಟ್ಟರು ಅಲ್ಲದ "ಹಗಲು ಕಗ್ಗೊಲೆ ಟಿಮಾನ್ಯ'' ಎಂಬ ಬಿರುದನ್ನೂ ಬಿರುದನ್ನು ಹೊಗಳಲಿಕ್ಕೆ ಭಟರನ್ನೂ ಕೊಟ್ಟರು

ಈ ಪ್ರಕಾರವಾಗಿ ತಿಮ್ಮನಾಯಕನು ನಾಡಿನಲ್ಲಿ ತನ್ನ ಬೆಳಕನ್ನು ಕೆಡವಿ ವಿಜಯನಗರದವರಲ್ಲಿ ಉನ್ನತ ಪದವಿಯನ್ನು ಪಡೆಯುತ್ತಿರುವುದನ್ನು ಕುಹಕಿಗಳಿಂದ ಸೈರಿಸಿಕೊಳ್ಳುವುದಾಗಲಿಲ್ಲ ಅವರು ರಾಯರ ಕಡೆಗ ಬಹಳವಾಗಿ ಇವನ ವಿರುದ್ಧ ಚಾಡಿಯನ್ನು ದೂರಿದರು ಈ ಕ್ಷುದ್ರರುಗಳಿಗೆಲ್ಲ ರಾಯರು ಕಿವಿಗೊಟ್ಟು ತಿಮ್ಮಣ್ಣನಾಯಕನನ್ನು ವಿಜಯನಗರಕ್ಕೆ ಕರಯಿಸಿಕೊಂಡು ಬಂಧಿಸಿ ಸರೆಯಲ್ಲಿಟ್ಟನು ಆತನ ಸಂಗಡಿಗರಾಗಿ ಬಂದಿದ್ದ ಅಣ್ಣನಾದ ಒಬಳಣ್ಣನೂ ದಾದನಾಯಕನೂ ಇನ್ನು ಕೆಲವರೂ ಆತನೊಡನ ಬಂಧನಕ್ಕೊಳಗಾದರು ಅವರು ತಲೆತಪ್ಪಿಸಿಕೊಂಡು ದುರ್ಗವನ್ನು ಸೇರಿದರು ಆದರೆ ತಿಮ್ಮಣ್ಣನಾಯಕನು ರಾಜಾಜ್ಞೆಯನ್ನು ಮೀರಬಾರದೆಂದು ವಿಜಯನಗರದಲ್ಲಿಯೇ ಇದ್ದು ಮರಣ ಹೊಂದಿದನು



## ಅರಿಶಿರಮರ್ದಿನಿಯಾದ

# ಓಬವ್ವ

---

## (೧೭೭೬)

ಘಟಪಟ ನ್ಯಾಯದಲ್ಲಿ ತೊಡಗಿದ ವೇದಾಂತಿಗಳು ಜೀವವು ಅಮರವೆಂದು ಸಿದ್ಧಪಡಿಸಲಿಕ್ಕೆ ಎಷ್ಟು ಪ್ರಯತ್ನಪಟ್ಟರೂ, ಎಲ್ಲಿಯವರೆಗೆ ಆ ತತ್ವವು ಆಚರಣೆಯಲ್ಲಿ ಇಳಿದಿಲ್ಲವೋ ಅಲ್ಲಿಯವರೆಗೆ ಆ ಒಣ ವೇದಾಂತದ ಮಾತಿನಿಂದೇನೂ ಪ್ರಯೋಜನವಾಗುವುದಿಲ್ಲ ಅದೇ, ಯಾರ ಆಚರಣೆಯಲ್ಲಿ ಜೀವವು ಅಮರವೆಂಬುದು ಇಳಿದಿರುವುದೋ ಅವರು ಬಾಯಿಯಿಂದ ವೇದಾಂತದ ಗುಡ್ಡಗುಡ್ಡದಂಥ ಮಾತುಗಳನ್ನಾಡದಿದ್ದರೂ ಅವರು ನಿಜವಾದ ವೇದಾಂತಿಗಳೇ ಹಿಂದೂಧರ್ಮವು ಹಲಕೆಲವು ತತ್ವಗಳನ್ನು ಸಾಮಾನ್ಯ ಜನರ ಮನದಲ್ಲಿ ಕೂಡ ಅತ್ಯಂತ ಆಳವಾಗಿ ನಡಿಸಿಟ್ಟು, ಆ ತತ್ವಗಳಿಗೋಸ್ಕರ ಅವರು ಪ್ರಾಣವನ್ನು ಅರ್ಪಿಸಲು ಕೂಡ ಸಿದ್ಧರಾಗುವಂತೆ ಮಾಡಿದೆ ಪತಿಯ ಸಲುವಾಗಿಯೂ ಸ್ವಾಮಿಯ ಸಲುವಾಗಿಯೂ ಮನುಷ್ಯನು ತನ್ನ ಪ್ರಾಣವನ್ನು ಕೊಡಬೇಕೆಂಬ ಮಾತು ಒಂದು ಕಾಲದಲ್ಲಿ ಈ ದೇಶದಲ್ಲಿ ಸಾಮಾನ್ಯರೆಂದು ತೋರುವವರಲ್ಲಿಯೂ ಆಳವಾಗಿ ಊರಿಕೊಂಡಿತ್ತು.

ಚಿತ್ರದುರ್ಗದಲ್ಲಿ ೧೮ನೆಯ ಶತಮಾನದಲ್ಲಿ ಆಗಿಹೋದ ಓಬವ್ವ ಎಂಬ ಸಾಮಾನ್ಯ ಹೆಣ್ಣುಮಗಳು ಇದೇ ಮಾದರಿಯವಳು ಅವಳು ಓದಲಿಕ್ಕೆ ಕಲಿತವಳಲ್ಲ ಅವಳು ಗಹನಪಂಡಿತಳಲ್ಲ, ಉಚ್ಚವೆನಿಸಿಕೊಳ್ಳುವ ಕುಲದಲ್ಲಿ ಹುಟ್ಟಿದವಳೂ ಅಲ್ಲ ಆದರೆ, ಅವಳಿಗೆ ಒಂದು ಮಾತು ಪೂರ್ಣ ಮನವರಿಕೆಯಾಗಿತ್ತು ಅದೇನೆಂದರೆ ಶತ್ರುಗಳು ಕೋಟೆಯಲ್ಲಿ ಕಳ್ಳತನ

ದಿಂದ ಹೊಕ್ಕರ ಜೀವದ ಹಂಗು ತೊರೆದು ಅವರನ್ನು ತಡೆಯಬೇಕೆಂಬ
ಮಾತು. ಆದುದರಿಂದ, ಅವಳು ಚಿತ್ರದುರ್ಗದ ಕೋಟೆಯಲ್ಲಿ ಹೈದರ
ಅಲ್ಲಿಯ ದಂಡು ಹೊಕ್ಕು ಹಾವಳಿ ಮಾಡುತ್ತಿರುವಾಗ, ಒಬ್ಬಳೇ ಧೈರ್ಯ
ದಿಂದ ಶತ್ರುಗಳನ್ನು ಕೇವಲ ಒಂದು ಒನಿಕೆಯಿಂದ ತಡೆದು ಬಡಿದು,
ಕೊನೆಗೆ ವೀರಸ್ವರ್ಗವನ್ನು ಪಡೆದಳು!

ಈ ಒಬವ್ವನು ಚಿತ್ರದುರ್ಗದಲ್ಲಿದ್ದ ಒಬ್ಬ ಕಹಳೆಯವನ ಹೆಂಡತಿ.
ದುರ್ಗದ ಸಾಮಾನ್ಯ ನಿವಾಸಿಗಳಲ್ಲೊಬ್ಬಳು. ಅವಳಿಗೆ ದೇಶಾಭಿಮಾನ,
ದೇಶಸೇವೆ ಇವುಗಳ ಬಗ್ಗೆ ಯಾರೂ ಉದ್ಬುದ್ಧವಾದ ಉಪದೇಶವನ್ನು
ಮಾಡಿರಲಿಲ್ಲ. ಇವರು ನಮ್ಮವರು, ಇವರು ನಮ್ಮ ಶತ್ರುಗಳು ಎಂಬು
ದಿಷ್ಟೇ ಅವಳಿಗೆ ಗೊತ್ತು. ಆದರೆ, ಮಿಕ್ಕವರಂತೆ ಅವಳು ಪ್ರಸಂಗ ಒದ
ಗಿದಾಗ ಜೀವಕ್ಕೆ ಹೆದರಿ ಹಿಂಜರಿಯುವ ಹೆಣ್ಣುಮಗಳಲ್ಲ. ಸಂಕಟ
ಸಮಯದಲ್ಲಿ, ನಾಸೀ ಎನ್ನುವ ಗಂಡುಗಲಿಗಳಿಗಿಂತಲೂ ಈ ಹೆಣ್ಣುಗಲಿಯು
ಹೆಚ್ಚಿನ ಶೌರ್ಯವನ್ನು ತೋರಿಸುವ ಧೈರ್ಯವುಳ್ಳವಳು. ಸಿಂಹವು ಹೆಣ್ಣಾ
ದರೇನು ಗಂಡಾದರೇನು? ಅದರ ವಿಕ್ರಾಂತವು ಯಾವಾಗಲೂ ಜಾಜ್ವಲ್ಯ
ಮಾನವಾಗಿಯೇ ಇರುವುದು. ದುರ್ಗವನ್ನು ಹೈದರ ಅಲ್ಲಿಯು ಮುತ್ತಿ
ದಾಗ ಈ ಸಿಂಹಿಣಿಯು ತನ್ನ ತೋಳ್ಬಲ್ಪಿನಿಂದ ಕೆಲವು ಕಾಲ ಹೈದರ
ಅಲ್ಲಿಯ ಸೇನಾಶರಧಿಯನ್ನು ತಡೆದುಹಿಡಿದಳು.

ಹಿಂದಕ್ಕೊಮ್ಮೆ ಹೈದರನು ವಿಪುಲ ಸೇನಾಸನ್ನಾಹದೊಡನೆ ಚಿತ್ರ
ದುರ್ಗವನ್ನು ಮುತ್ತಿ, ಪಾಳೆಯಗಾರನಾದ ಕಡೆಯ ಮದಕರಿನಾಯಕ
ನೊಂದಿಗೆ ಅತಿ ವಿಕ್ರಮದಿಂದ ಕಾದಿ, ಕೋಟೆಯನ್ನು ತೆಗೆದುಕೊಳ್ಳಲಿ
ಕ್ಕಾಗದ ನಿರಾಶೆ ಹೊಂದಿ ಹಿಂದಿರುಗಿದ್ದನು. ಆಬಳಿಕ, ಆತನು ತನ್ನ
ಮಗನಾದ ಟೀಪುವನ್ನು ೨೦೦೦೦ ಕುದುರೆ ದಳದೊಡನೆ ಚಿತ್ರದುರ್ಗದ
ಮೇಲೆ ದಾಳಿ ಇಡುವುದಕ್ಕೆ ಕಳುಹಿದನು. ಆಗ ಕೂಡ, ಕೋಟೆಯು
ಶತ್ರುಗಳ ಕೈವಶವಾಗಲಿಲ್ಲ. ಹೈದರನು ಮತ್ತೆ ಒಂದು ಲಕ್ಷ ತುಳಿಲಾಳು
ಗಳನ್ನು ಕೂಡಿಕೊಂಡು ದುರ್ಗದ ಮೇಲೆ ದಾಳಿಮಾಡಿದನು. ಪಾಳೆಯ
ಗಾರನ ದಂಡೂ, ಕೋಟೆಯನ್ನೇರಲಿಕ್ಕೆ ಹವಣಿಸುವ ಹಗೆಗಳನ್ನು ಕತ್ತರಿಸ

ತೊಡಗಿತು ಹೈದರನ ದಂಡಿನವರು ಕಡುತರವಾಗಿ ಹೋರಾಡಿದರೂ ಅವರಿಗೆ ಕೋಟೆಯನ್ನು ನುಗ್ಗಲು ಸ್ವಲ್ಪವೂ ಆಸ್ಪದ ಸಿಕ್ಕಲಿಲ್ಲ ಆತನ ಸೈನ್ಯದಲ್ಲಿ ಅನೇಕರು ಸತ್ತುಹೋಗಿ, ಕಂದುಕವೆಲ್ಲ ಹೆಣದಲ್ಲಿ ಮುಚ್ಚಿ ಹೋಯಿತು. ಎಷ್ಟು ಗುಂಡುಗಳನ್ನು ಹೊಡೆದರೂ ಕೋಟೆ ತುಸುವಾದರೂ ಜಗ್ಗಲಿಲ್ಲ ಕೋಟೆಯ ಮೇಲಿದ್ದವರ ಏಟುಗಳನ್ನು ತಾಳಲಾರದೆ, ಹೈದರನ ಸೇನೆ ಹಿಂದೆಗೆಯ ತೊಡಗಿತು ಪಾಳಯಗಾರನ ಪೌರುಷಕ್ಕೆ ಹೈದರನು ಬೆರಗಾಗಿ, ಕೋಟೆಯನ್ನು ಕೈವಶಮಾಡಿಕೊಳ್ಳುವುದಕ್ಕೆ ಬೇರೆ ಉಪಾಯವನ್ನು ಯೋಚಿಸುವ ಯೋಚನೆಯಲ್ಲಿ ತೊಡಗಿದನು ಕೋಟೆಯನ್ನು ಒಡೆಯುವುದಂತೂ ಅಸಾಧ್ಯವಾಯಿತು ಬೇರೆ ಉಪಾಯವೆಂದರೆ, ಕೋಟೆಯಲ್ಲಿ ಕಳ್ಳತನದಿಂದ ನುಗ್ಗಲು ಯತ್ನಿಸುವುದು ಆದುದರಿಂದ, ಆತನು ಕೋಟೆಯನ್ನು ಸೇರುವುದಕ್ಕೆ ಎಲ್ಲಿಯಾದರೂ ಕಳ್ಳದಾರಿಯೇನಾದರೂ ಉಂಟೋ ಹೇಗೆಂಬುದನ್ನು ತಿಳಿದುಕೊಳ್ಳುವುದನ್ನು ಗೂತ್ತುಪಡಿಸಿದನು ಆತನ ದಂಡಿನವರು ಕೋಟೆಯನ್ನು ಏರಿಹೋಗಲಿಕ್ಕೆ ಎಲ್ಲಿಯಾದರೂ ಒಂದು ಕಳ್ಳಹಾದಿಯಿರುವುದೋ ಎಂದು ನೋಡಲಾರಂಭಿಸಿದರು ಹೈದರ ಅಲ್ಲಿಯ ಬೇಹುಗಾರರು ವೇಷಗಳನ್ನು ಹಾಕಿಕೊಂಡು ಬೆಟ್ಟದ ಸುತ್ತಲು ತಿರುಗುವಾಗ ಒಬ್ಬ ಹೆಂಗುಸು ಮಡಕೆಯಲ್ಲಿ ಮೊಸರನ್ನು ತೆಗೆದುಕೊಂಡು ಒಂದು ಬಂಡೆಯ ಸಂದಿಯಲ್ಲಿ ನುಸುಳಿ ಕೋಟೆಯ ಮೇಲೆ ಏರಿಹೋದುದನ್ನು ಕಂಡರು ಈ ಸುಳುವನ್ನು ತಿಳಿದು ಹೈದರನ ದಂಡಿನವರು ಆ ಕಡೆ ಕೋಟೆಗೆ ಏಣಿ, ಉಡು ಮೊದಲಾದುದನ್ನು ಏರಿಸಿ ಲಗ್ಗೆ ಹತ್ತಿದರು ಆಗ, ಅವರಿಗೆ ಒಂದು ದೊಡ್ಡ ಬಂಡೆಗಲ್ಲಿನಲ್ಲಿ ಒಂದು ಚಿಕ್ಕ ಸಂದು ಇದ್ದುದು ಕಾಣಿಸಿತು. ಅದರಲ್ಲಿ ಒಬ್ಬ ಮನುಷ್ಯನು ಹೊಟ್ಟೆ ಹೊಸೆದುಕೊಂಡು ಹೋಗುವುದಕ್ಕೆ ಮಾತ್ರ ಅನುವು ಇತ್ತು ಒಳಗೆ ದಟ್ಟವಾದ ಕತ್ತಲೆ ಬಂಡೆಗಲ್ಲಿನ ಸಂದಿಯೊಳಗಿಂದ ಮೇಲಕ್ಕೇರಿ ಹೋಗುವ ಉದ್ದೇಶದಿಂದ, ಅನೇಕ ವೀರರು ಒಬ್ಬೊಬ್ಬರಾಗಿ ಒಳಗೆ ನುಗ್ಗಿದರು ಆ ಬಂಡೆಯ ಮೇಲ್ಗಡೆಗೆ ಈ ಓಬವ್ವನ ಗಂಡನಾದ ಕಹಳೆಯವನು ಇರುವ ಸ್ಥಳ. ಆತನು ತನ್ನ ಕೆಲಸವನ್ನು ಮುಗಿಸಿಕೊಂಡು ಗುಡಿಸಲಿಗೆ ಊಟಕೆ ಹೋಗಿದ್ದನು. ಓಬವ್ವನು ಗಂಡನಿಗೆ ಊಟಕ್ಕೆ ಬಡಿಸಿ, ನೀರು ತರುವು

ದಕ್ಕೆ ಬಂಡೆಗಲ್ಲಿನ ಸಮೀಪಕ್ಕೆ ಇರುವ ಒಂದು ಕೊಳಕ್ಕೆ ಹೋದಳು. ಆಗ, ಅವಳಿಗೆ ಆ ಬಂಡೆಗಲ್ಲಿನ ಸಂದಿಯೊಳಗಿಂದ ಯಾರೊ ಮೇಲಕ್ಕೇರಿ ಬರುವ ಸಪ್ಪಳ ಕೇಳಿಸಿತು. ಶತ್ರುಗಳಿಗೆ ಕಳ್ಳಕಂಡಿಯು ಗೊತ್ತಾಯಿತೆಂದೂ ಅವರು ಮೇಲಕ್ಕೇರಿ ಬಂದು ಕೋಟೆಯನ್ನು ಹೊಕ್ಕರ ಸರ್ವವೂ ನಾಶವಾಗುವುದೆಂದೂ ತರ್ಕಿಸಿ, ಅವಳು ತನ್ನ ಗುಡಿಸಲಿಗೆ ಧಾವಿಸಿದಳು. ಅಷ್ಟರಲ್ಲಿ ಗಂಡನು ಅಲ್ಲಿ ಇರಲಿಲ್ಲ ಆತನು ಊಟಮಾಡಿ ಹೊರಟು ಹೋಗಿದ್ದನು. ಇನ್ನು ಆತನನ್ನು ಹುಡುಕುತ್ತ ಹೋಗುವುದು ಏಹಿತವಲ್ಲವೆಂದು ಬಗೆದು, ಆ ವೀರಳು ಗುಡಿಸಲಿನೊಳಗಿದ್ದ ಒಂದು ಒನಕೆಯನ್ನೆತ್ತಿಕೊಂಡು ಓಡಿ ತಿರುಗಿ ಆ ಬಂಡೆಗಲ್ಲಿನ ಬಾಯಿಗೆ ಬಂದು ನಿಂತುಕೊಂಡಳು ಆ ಸಂದಿಯೊಳಗಿಂದ ಒತ್ತೊತ್ತಿಬರುವ ಕಟ್ಟಾಳುಗಳನ್ನು ಒಬ್ಬೊಬ್ಬನ್ನುರತನ್ನ ಕೈವನಿಕೆಯಿಂದ ಕುಟ್ಟಿ ನಲಕ್ಕೆ ಕೆಡುಹಿದಳು ಅಲ್ಲಿ ಶತ್ರುಗಳ ಹೆಣದ ದೊಡ್ಡದೊಂದು ರಾಶಿ ಬಿದ್ದಿತು ಶತ್ರುಗಳನ್ನು ವನಕೆಯಿಂದ ಕುಟ್ಟಿಕುಟ್ಟಿ ಓಬವ್ವನ ಕೈಗಳು ಸೋತುಹೋದುವು. ಆದರೆ, ಮಾಡುವುದೇನು? ಒಂದುಕ್ಷಣ ಕೈ ನಿಲ್ಲಿಸಿದ್ದರೆ ಶತ್ರುಗಳು ಏರಿಬರುತ್ತಿದ್ದರು. ಮಿಕ್ಕವರನ್ನು ಕರಯಲು ಅವಕಾಶವಿರಲಿಲ್ಲ. ಹೀಗೆ ಬಹುಕಾಲದವರೆಗೆ ಅವಳು ತನ್ನ ಮುಸುಲಾಯುಧದಿಂದ ಯುದ್ಧಮಾಡಿ ಶತ್ರುಗಳನ್ನುಯಮ ಸದನಕ್ಕಟ್ಟಿದಳು ಅಷ್ಟರಲ್ಲಿ, ಆಕೆಯ ಗಂಡನು ಅವಳನ್ನುಹುಡುಕವುದಕ್ಕೆಂದು ಬಂದು ನೋಡುತ್ತಾನೆ! ಓಬಿಯ ಮೈಕೈಗಳು ರಾಮಾರಕ್ತವಾಗಿ ಹೋಗಿದ್ದುವು ಅವಳ ಕಣ್ಣೆದುರಿಗೆ ಅವಳಿಗೆ ಶತ್ರುಗಳೇ ಕಾಣುತ್ತಿದ್ದರಲ್ಲದೆ ಮತ್ತಾರೂ ಕಾಣುತ್ತಿರಲಿಲ್ಲ. ಗಂಡನು ಬಂದರೂ ಅವಳು ಅವನನ್ನು ಗುರುತಿಸದೆ, ಆತನೂ ಶತ್ರುವಿನ ಕಡೆಯವನೆಂದೇ ತಿಳಿದು ಅವಳು ಆತನ ಮೇಲೆ ವೀರಾವೇಶದಿಂದ ಏರಿಹೋದಳು. ಈ ಸಂಧಿಯನ್ನು ಸಾಧಿಸಿ ಶತ್ರುಗಳು ಆ ಸಂದಿಯೊಳಗಿಂದ ಏರಿ ಬಂದು ಓಬ್ಬವ್ವನನ್ನು ಅಟ್ಟಿಕೊಂದರು ಈ ಬಗೆಯಾಗಿ, ಓಬವ್ವನು ಅತುಳವಾದ ಶೌರ್ಯವನ್ನು ತೋರಿಸಿ, ತನ್ನ ದೊರೆಯ ಕೋಟೆಯನ್ನು ಉಳಿಸುವುದಕ್ಕೆ ತನ್ನ ಜೀವದ ಬಲಿಯನ್ನು ಕೊಟ್ಟಳು!

---

# ಆಧಾರ ಗ್ರಂಥಗಳು




1. Inscriptions from Mysore and Coorg by Mr Rice.

2 Epegraphia Karnatica volumes

3. Epegraphia Indica volumes

4. Ancient History of the Deccan by G Jouveau-Deebrevil.

೫. ಪಾಳಯಗಾರರು ಎಂ ಎಸ್ ಪುಟ್ಟಣ್ಣಾ ಬಿ ಎ,

೬. ಚಿತ್ರದುರ್ಗದ ಪಾಳಯಗಾರರು ಎಂ ಎಸ್ ಪುಟ್ಟಣ್ಣಾ ಬಿ ಎ,

೭ ಕರ್ನಾಟಕ ಸಾಮ್ರಾಜ್ಯ ಸಂಪುಟ ೧ ಮತ್ತು ೨ ರಾ ಹ ದೇಶ ಪಾಂಡೆ ಎಂ ಎ, ಧಾರವಾಡ.

೮ ಕರ್ನಾಟಕ ಕವಿಚರಿತೆ ಭಾಗ ೧-೨-೩ ಶ್ರೀ ಆರ್ ನರಸಿಂಹಾ ಚಾರ್ಯ ಎಂ ಎ,

9. Mythic society Journal vol. XX

10. Ancient India by S. Krishnaswami Iyengar.

೧೧ ಕಂಠೀರವ ವಿಜಯ—ಗೋವಿಂದ ವೈದ್ಯ

೧೨. ಕನ್ನಡ ಐದನೆಯ ಪುಸ್ತಕ (ಮೈಸೂರ ಪ್ರಾಂತದ್ದು.)

೧೩. ಮಹಿಸೂರು ಸಂಸ್ಥಾನದ ಚರಿತ್ರ—ಎಂ ಶ್ಯಾಮರಾವ ಎಂ ಎ.,

14. A forgotten Empire-Robert sewell.




# ಶಬ್ದಕೋಶ.

---

## ಅ

ಅಗುರ್ವು = ಘೋರ ರೂಪ, ಅಂಜಿಕೆ ಬರುವಂಥ ಆಕಾರ.
ಅಗ್ರಾಹವ = ಮುಖ್ಯಕಾಳಗ
ಅಂಕಚೇರಿಯರು = ಶೂರರು
ಅಂಗವಣೆ = ಕೌಶಲ್ಯ, ಚಾತುರ್ಯ, ಸಾಧನ
ಅಟ್ಟವಣಿಗೆ = ಅಟ್ಟ. ಅಟ್ಟಣ
ಅಣ್ಮು = ಪರಾಕ್ರಮ, ಸಾಮರ್ಥ್ಯ
ಅಣೆದು = ತಾಗಿ (ಅಣೆ=ತಾಕು)
ಅದಟು, ಅಧಟು = ಶೌರ್ಯ, ಧಿಟ್ಟತನ
ಅವಷ್ಟಂಬ = ಆಶ್ರಯ
ಅಳ್ಕು = ನಿರ್ವೀರ್ಯವಾಗು.
ಅಳುಕಿಸು = ಅಂಜಿಸು

## ಆ

ಆಘಾಟ = ಎಲ್ಲೆ, ಸೀಮೆ, ಮರ್ಯಾದೆ
ಆದಾರ್ದು = ಗರ್ಜಿಸಿ ಗರ್ಜಿಸಿ (ಆರ್=ಕೂಗು, ಧ್ವನಿಮಾಡು).
ಆಂತವರು = ಇದಿರಾದವರು ಪ್ರತಿಭಟಿಸಿದವರು
ಆಯತ = ಅಳತೆ, ಪ್ರಮಾಣ
ಆರ್ಪು = ಶೌರ್ಯ
ಆಳ್ದನು = ಆಳುವವನು, ಒಡೆಯನು.
ಆಳ್ವರಿ = ಪ್ರಾಕಾರ, ಸುತ್ತಲಿನ ಗೋಡೆ.

## ಇ

ಇಟ್ಟಣಿಸಿ = ಗುಂಪಾಗಿ ಬಂದು.

## ಈ

ಈಳ್ದುಕೊಂಡು = ಸೆಳೆದುಕೊಂಡು.

## ಉ

ಉಚ್ಚಳಿಸು = ಒತ್ತರದಿಂದ ಹೊರಗೆಬರು.
ಉಡುಗಿಸು = ಕುಂಠಿತವಾಗಿ ಮಾಡು
ಉಬ್ಬುಗುದುರೆಗಳು = ಸೊಕ್ಕಿದ ಕುದುರೆಗಳು.
ಉರ್ಕು = ಸಾಮರ್ಥ್ಯ

## ಎ

ಎಡವಟ್ಟಾದ = ಆಡ್ಡಾಡಿ, ಅಡ್ಡಹಾದಿ ಹಿಡಿಯುವ.

## ಒ

ಒಕ್ಕಲಿಕ್ಕಿ = ಚಲ್ಲಾಪಿಲ್ಲಿಯಾಗಿ ಮಾಡಿ
ಒಕ್ಕೈಯುವ = ಒಂದೇ ಕೈಯುಳ್ಳವ
ಒರ್ನುಡಿ = ಒಂದೇ ನುಡಿ, ಏಕಭಾಷೆ
ಒಳ್ಪು = ಒಳುಪು, ಕೆಚ್ಚು, ಗೌರವ

## ಓ

ಓಗಡಿಸು = ಓಕರಿಸು ಕುಂದು

## ಕ

ಕಗ್ಗೊಲೆಯಕಾಳಗ = ಅತ್ಯಂತ ಕೊಲೆಯಾದ ಕಾಳಗ.
ಕಟಕ = ಸೈನ್ಯ.
ಕಟ್ಟಾಣತಿ = ಕಟ್ಟಪ್ಪಣೆ
ಕಟ್ಟಾಳುತನ = ಬಂಟತನ
ಕಡಂಗಿ = ಹುರುಪುಗೊಂಡು, ರಭಸದಿಂದ.

ಕಡಿಕಡಿಯಾಗು = ತುಂಡು ತುಂಡಾಗು
ಕಡಿಖಂಡವಾಗಿ = ಕಡಿದುತುಂಡಾಗಿ
ಕಡೆಗಾಲ = ಪ್ರಳಯಕಾಲ
ಕಣೆ = ಬಾಣ
ಕಂಪಳ = ಗುಂಪು
ಕರಡ = ಒಣ ಹುಲ್ಲು
ಕರವತ್ತ = ಕರಗಸ
ಕರವಾಳ = ಕತ್ತಿ
ಕರಾಳಾಸಿ = ಉಗ್ರವಾದ ಕತ್ತಿ
ಕವರ್ದು = ಸುಲಿಗೆ ಮಾಡಿ, ಒತ್ತಾಯದಿಂದ ತೆಗೆದುಕೊಂಡು.
ಕವಳಿಸು = ನುಂಗು
ಕುತ್ತಿ = ಹಿಚುಕಿ
ಕುಂಭಿ = ಆನೆ
ಕೂರಾದ = ಹದನವಾದ
ಕೆಚ್ಚಾಳು = ವೀರ.
ಕೆನ್ನೀರು = ರಕ್ತ
ಕೈಸುರಿಗೆ = ಕೈಗತ್ತಿ, ಚಿಕ್ಕಕತ್ತಿ
ಕೊಳಗುಳ = ಕಾಳಗ, ಯುದ್ಧ
ಕೋಟಜ = ಕಪ್ಪು, ಕರ.

ಗಂಡ = ವೀರ, ಶತ್ರು, ಕಲಿ.
ಗಂಡಪೆಂಡಾರ = ಒಂದು ತರಹದ ಆಭರಣ.
ಗಂಡುದೋರ್ಪರಿಗೆಮಾರಿ = ಪೌರುಷದ ಬಿಂಕವನ್ನು ತೋರಿಸುವವರಿಗೆ ಶತ್ರು.
ಗಾಂಗೇಯ = ಭೀಷ್ಮ
ಗೊಂದಳಿಸಿ = ಗಜಬಜಸಿ ಗುಂಪುಗೂಡಿ

## ಘ

ಘಟಕ = ಗಟ್ಟಿಗ
ಘಟಿಕಾಸ್ಥಾನ = ಪಾರಶಾಲೆ
ಘರಟ್ಟ = ಬೀಸುಗಲ್ಲು

## ಚ

ಚಲದಂಕಮಲ್ಲ = ಚಲಹಿಡಿದು ಹೋರಾಡುವ ಶೂರ

## ಛ

ಛಲದಂಕಮಲ್ಲ = ಛಲ ಹಿಡಿದು ಹೋರಾಡುವ ಶೂರ.

## ಜ

ಜಗ್ಗಲಿಲ್ಲ = ವಶವಾಗಲಿಲ್ಲ, ಬಗ್ಗಲಿಲ್ಲ
ಜೊಂಡು = ದಟ್ಟವಾದ ವಿಮಾನಗಳು

## ತ

ತಕ್ಕಿನ ವಿಕ್ರಮಾರ್ಜುನ=(ತಕ್ಕು=ದೊಡ್ಡ ಬಹಳ ಶೂರನಾದ ಅರ್ಜುನ.)
ತನಿವೀರರಸ = ಪರಿಪಕ್ವವಾದ ವೀರರಸ
ತರವಾರ = ಕತ್ತಿ, ಖಡ್ಗ
ತಳಿಯಮುರಿ = ಸುತ್ತುಗಟ್ಟನ್ನು ಮುರಿ, ಬೇಲಿಯನ್ನು ಮುರಿ
ತಳ್ತಿರಿದು = ತಳ್ತು + ಇರಿದು = ತಿಕ್ಕಿ ಇರಿದು
ತಲೆಹರಿಗೆ = ತಲೆಗಳನ್ನು ಸಂರಕ್ಷಿಸುವ ಢಾಲು
ತಾಗಿ ತಡೆವರನ್ನು = ಹೊಂದಿಕೊಂಡು ಅಡ್ಡಗಟ್ಟುವವರನ್ನು.
ತುಡುಕಿರಿದು = ತುಡುಕಿ + ಇರಿದು ತುಡುಕು = ಗಟ್ಟಿಯಾಗಿ ಹಿಡಿ.
ತುತ್ತಿ = ನುಂಗಿ (ತುತ್ತು = ತುತ್ತುಮಾಡು, ನುಂಗು)
ತುಯಿದು = ಎಳೆದು (ತುಯಿ = ಎಳೆ)
ತುಳಿಲಾಳು = ಶೂರರು, ಬಂಟರು (ತುಳಿಲ್ = ಶೂರ)
ತೂಳ್ದ = ಬೆನ್ನಟ್ಟ (ತೂಳ್ = ಬೆನ್ನಟ್ಟು)

ತೆನೆ (ಕೋಟೆಯ) = ತುದಿ, ಪ್ರಾಕಾರಾಗ್ರ
ತೊತ್ತಳದುಳಿ = ನುಗ್ಗುನುಗ್ಗಾವಂತೆ, ತುಳಿ.
ತೊವಲು = ತೊಗಲು, ಚರ್ಮ
ತೋರ್ಕೆವೆತ್ತ = ತೋರಿಕೆಯನ್ನು ಪಡೆದ
ತೋಳ್ತೀನು
ತೋಳ್ತಿಂಡಿ } = ಸಾಹಸವನ್ನು ತೋರಿಸುವ ಇಚ್ಛೆ ಆತುರತೆ
ತೋಳ್ಬಲ್ಪು = ತೋಳಿನ ಸಾಮರ್ಥ್ಯ
ತೋಳ್ವೊಯ್ಯು = ತೋಳಿನಿಂದ ಹೊಯ್ಯು

## ದ

ದಿಗ್ಭಿತ್ತಿ = ದಿಕ್ಕುಗಳೆಂಬ ಗೋಡೆಗಳು
ದುರಗಲಿತನ = ಶೂರತನ, ಧುರದಲ್ಲಿಯ ಶೂರತನ
ದೋರ್ಬಲ = ತೋಳಿನ ಸಾಮರ್ಥ್ಯ
ದೋರ್ವಿಕ್ರಮಾಡಂಬರ = ತೋಳಿನ ಸಾಮರ್ಥ್ಯದ ಆಡಂಬರ, ತೋರಿಕೆ

## ನ

ನನ್ನಿಯ = ಪ್ರೀತಿಯ
ನಿಕೇತನ = ಮನ
ನಿಸಿತಖಡ್ಗ = ಹದನವಾದ ಖಡ್ಗ
ನಿಕ್ಷುಣ್ಣವಾಗಿ = ಸ್ಪಷ್ಟವಾಗಿ
ನೆಗಳ್ತೆ = ಪ್ರಸಿದ್ಧಿ, ಕೀರ್ತಿ
ನೇರ್ಪಡಿಸಿ = ಚೆನ್ನಾಗಿ ನರಿಪಡಿಸಿ

## ಪ

ಪಡಲ್ವಡಿಸಿ = ಚದರಿಸಿ, ಮುರಿದು
ಪಡೆಗೊಂಡು = ಸೈನ್ಯವನ್ನು ತಗೆದುಕೊಂಡು
ಪಡೆವಳ = ಸೇನಾಪತಿ
ಪರ್ಯಾಣ = ಕುದುರೆಯ ಥಡಿ, ಜೀನು

## ಪ

ಪಾರುಪತ್ಯಮಾಡು = ದಂಡಿಸು
ಪೆರಗಿಕ್ಕಿ = ಹಿಂದಕ್ಕೆಸರಿಸಿ (ಪೆರಗು = ಹಿಂಭಾಗ)
ಪೇಚಿನಲ್ಲಿ = ಗಂಡಾಂತರದಲ್ಲಿ
ಪೇಸಳೆಕೊಂಡು = (ಪೇಸು = ಹೇಸಿಗೆ) ಹೇಸಿಗೆ ಏಳುವಂತ ಕೊಂದು
ಪೊಂಗು = ಧೈರ್ಯ
ಪೊನ್ನತೊಡರು = ಒಂದು ತರದ ಬಂಗಾರದ ಆಭರಣ
ಪೊಗಳ್ತೆ = ಹೊಗಳಿಕೆ

## ಬ

ಬಲ್ಪು = ಶೌರ್ಯ
ಬಲ್ಗರುಳು = ದೊಡ್ಡಕರಳು
ಬಲ್ಬಂಟರು = ಹರಿದಾದ ಶೂರರು
ಬವರ = ಕಾಳಗ
ಬಳಸು = ಸುತ್ತುಗಟ್ಟು
ಬಾರಿಗೆ = ಹೊಡೆತಕ್ಕೆ, ಸರತಿಗೆ,
ಬಿಣ್ಪು = ಗೌರವ
ಬಿತ್ತರದಿಂದ = ವಿಸ್ತಾರದಿಂದ
ಬೀರ = ವೀರ್ಯ
ಬೆಂಗೊಡದ = ಬೆನ್ನುಕೊಡದ
ಬೇಗುದಿಗೊಳ್ಳು = ದುಃಖಪಡು
ಬೇಹಿನವರು, ಬೇಹುಗಾರರು = ಗುಪ್ತಚಾರರು
ಬೊಬ್ಬಿರಿ = ಆರ್ಭಟಿಸು

## ಭ

ಭುಜಬಲಾವಷ್ಟಂಬ = ಭುಜಬಲದ ಆಶ್ರಯ
ಭೋಗಪಟ್ಟಿ = ಇನಾಮು

## ಮ

ಮದವಾರಣ = ಮದೋನ್ಮತ್ತವಾದ ಆನೆ.
ಮದ್ದಾಳು = ಮತ್ತರಾದ ಆಳುಗಳು.
ಮನ್ನಯರು = ಮುಖ್ಯಸ್ಥರು, ಮಾನ್ಯರು
ಮಲೆತುನಿಂತ = ಸೊಕ್ಕಿಗೆ ಬಂದ, ಎರಿಕುಳಿತ.
ಮಲೆಯಾಳು = ಗುಡ್ಡಗಾಡಜನರು
ಮಸಗಿ = ತಿಕ್ಕಿ, ಮಸದು.
ಮಸೆವೆತ್ತ = ದಹನವಾದ
ಮಾರ್ಪಡೆ-ಭೀಮ = ಇದಿರಾದ ಸೈನ್ಯಕ್ಕೆ ಭೀಮನಂತಿರುವವ
ಮಾರ್ಮಲೆವ = ಸೊಕ್ಕಿ, ಇದಿರಾಗಿ ನಿಂತ
ಮಿಕ = ಕಾಡು ಹಂದಿ
ಮುಂಚೂಳಿಯ ಕಾಳಗ = ಎಲ್ಲಕ್ಕೂ ಮುಂದೆ ಹೋದ ಚೂಣಿಯ (ಸೈನಿಕರ) ಕಾಳಗ.
ಮುಡಿಪಾಗಿಡು = ವಿಶಿಷ್ಟ ಕಾರ್ಯಕ್ಕೋಸ್ಕರ ತಗೆದಿಡು.
ಮುನ್ನೀರು = ಸಮುದ್ರ
ಮುಂಬಿಟ್ಟು = ಮುಂದಕ್ಕೆ ಸಾಗಿಹೋಗಿ
ಮೆಳೆ = ದಟ್ಟವಾದ ಬಿದುರುಗಳ ಗುಂಪು
ಮೇರುವೆ = ಎತ್ತರವಾದ ಸ್ಥಳ, ಮೇಡು,
ಮೇಲಂಕವಣಿ = (ಅಂಕವಣಿ = ಎದೆಗೆ ಕಟ್ಟಿಕೊಳ್ಳುವ ಢಾಲು )
ಮೊನಮುರಿದು = ಸಾಮರ್ಥ್ಯವನ್ನು ಕುಂದಿಸಿ (ಮೊನ=ಸಾಮರ್ಥ್ಯ)
ಮೊನೆಗಾರರು = ಶೂರರು (ಮೊನ=ಕಾಳಗ).
ಮೋಹರ = ಕಾಳಗ.

## ರ

ರಟ್ಟೆಘರಟ್ಟ = ರಟ್ಟೆ ಅರಸರಿಗೆ ಬೀಸುಕಲ್ಲಿನಂತಿರುವ.
ರಾವಿ = ಹೊಂಚು ಹಾಕಿಕೊಂಡು ತಪ್ಪಿಸಿಕೊಳ್ಳುವುದಕ್ಕೆ ನೆಲಕ್ಕೆ ಹೊಂದಿ.
ರೊಪ್ಪೆಹಾಕಿಕೊಂಡು = ಕುರಿಗಳನ್ನು ಒಂದೆಡೆಗೆ ಕಟ್ಟಿಕೊಂಡು.

## ಲ

ಲಾಲಾಜಲಪ್ರವಾಹ=ಕುದುರೆಯ ಬಾಯಿಂದಹೊರಟ ಜೊಲ್ಲಿನ ಪ್ರವಾಹ

## ವ

ವಾರಾಸಿಪರ್ಯಂತ = ಸಮುದ್ರ ಪರ್ಯಂತ.
ವಾಹಿನಿ = ಸೈನ್ಯ
ವಿಕ್ರಮವೈಭವ = ಶೂರತನದ ಸೊಬಗು
ವಿಕ್ರಾಂತ = ಶೂರತನ
ವಿಜಿಗೀಷುವೃತ್ತಿ = ಜಯಿಸುವ ಇಚ್ಛೆ
ವೀರಾಡಂಬರ = ಶೌರ್ಯವನ್ನು ತೋರಿಸುವುದು
ವೈರಿಕುಲ ಕಾಲದಂಡ = ವೈರಿಕುಲಕ್ಕೆ ಯಮನಂತೆ

## ಸ

ಸಲೆಸಂದು = ಚೆನ್ನಾಗಿ ಹೊಂದಿಕೊಂಡು
ಸಾರಸ್ವತ = ಸಾಹಿತ್ಯ
ಸಾಲಮೋಹರ = (ಮೋಹರ = ಸಂಗ್ರಾಮ) ಕಾಳಗದ ಸಾಲು.
ಸಾಹಣಿ = ಕುದುರೆ ಏರುವುದರಲ್ಲಿ ಧುರೀಣ
ಸಿಲುಬೆ = ಶೂಲ
ಸೀಕರಿಯಾಗಿ = ಸುಟ್ಟು ಬೂದಿಯಾಗಿ
ಸುತ್ಥಣಿಯರು = ಕಾಲುದಳದವರು-
ಸುರಿಗೆಕಾರ = ಕತ್ತಿಗಳನ್ನು ಹಿಡಿದವರು
ಸುರುಟು = ಮುದುಡಿಕೊಂಡು
ಸೂಕರಾನೀಕ = ಕಾಡು ಹಂದಿಗಳ ಸಮೂಹ
ಸೆಣಸು = ಕೋಪಗೊಳ್ಳು
ಸೌಸವ = ಕಂಪು, ವಾಸನೆ, ಗಂಧ

## ಹ

ಹಿಂಚಿಸಿ = ಹಿಂದಕ್ಕೆ ಹಾಕಿ



# ಶುದ್ಧೀಕರಣ

## (ಅ) ಸಹಜವಾಗಿ ಗೊತ್ತಾಗುವ ಮುದ್ರಣದ ಮತ್ತು ಕೈತಪ್ಪಿನ ದೋಷಗಳು.

**ಪುಸ್ತಕ ಪ್ರವೇಶ**

| ಪುಟ | ಸಾಲು | ಶುದ್ಧ |
|---|---|---|
| ೨ | ೭ | ಓದಲಿಕ್ಕೆ |
| ,, | ೮ | ಕಾಲಕ್ಕೆ |
| ೪ | ೫ | ಪರಿಪಕ್ವದಶೆಗೆ |
| ೩ | ೪ | ಮಿಕ್ಕ ಕಡೆಗೆಲ್ಲಿಯೂ |

**ಮೂಲ ಪುಸ್ತಕ**

| ಪುಟ | ಸಾಲು | ಶುದ್ಧ |
|---|---|---|
| ೨ | ೧೨ | ಪರನ |
| ೩ | ೩ | ಚಾಣಕ್ಯ |
| ೩ | ೪ | ನಿರ್ಮೂಲ |
| ,, | ೭ | ಮದಾಂಧ |
| ೪ | ೧೫ | ಜರ್ಜರಿತನನ್ನಾಗಿ |
| ೫ | ೩ | ಆಕಸ್ಮಿಕವಾಗಿ |
| ,, | ೨೪ | ಆಜ್ಞಾಪಿಸಿದನು |
| ೭ | ೬ | ಹುಟ್ಟುತ್ತದ |
| ೯ | ೮ | ಅರಸರನ್ನೂ |
| ,, | ೯ | ಸುಕುಮಾರತೆಯಲ್ಲಿಯೇ |
| ,, | ೧೪ | ಆತನಿಗೆ |
| ,, | ೧೯ | ಅರಸನಾದೊಡನೆ |
| ,, | ೨೧ | ವಿರುದ್ಧವಾಗಿ |
| ೧೧ | ೧೯ | ತೀಕ್ಷ್ಣವಾದ |

| ಪುಟ | ಸಾಲು | ಶುದ್ಧ |
|---|---|---|
| ೧೨ | ೩ | ಕೊಂಡೊಡನೆಯೆ |
| ,, | ೪ | ಮೇಲೆ |
| ೧೩ | ೬ | ಪಾತಾಳಕ್ಕೊತ್ತಿ |
| ,, | ೧೮ | ಕೆನ್ನಾಲಗೆ |
| ,, | ೨೦ | ಹರ್ಷವರ್ಧನನ |
| ೧೪ | ೭ | ಕಟ್ಟಕಡೆಯ |
| ,, | ೧೫ | ನರವುಗೊಡುವ |
| ೧೫ | ೮ | ' ಆತನಿಗೆ ' ಹೆಚ್ಚಿಗೆ ಬಿದ್ದಿದೆ] |
| ೧೭ | ೧೫ | ಕುತ್ತುಗಳು |
| ೧೮ | ೯ | ಬೇಯ್ಯುತ್ತದ |
| ೧೯ | ೫ | ಬೆನ್ನುಗಟ್ಟಿ |
| ,, | ೯ | ಕಕ್ಕುಲಾತಿ |
| ೨೦ | ೧೯ | ಸ್ವಾರ್ಥಿಯೆಂದು |
| ೨೧ | ೫ | ಅರ್ಹನಾರೆಂಬುದನ್ನು |
| ,, | ೧೮ | ಅಂತವರೊಡನೆ |
| ,, | ,, | ಆ ದೇಶವನ್ನು |
| ,, | ೨೨ | ಉಳಿಸಿಕೊಂಡನಲ್ಲದೆ |
| ೨೩ | ೫ | ಪ್ರಾರಂಭಕ್ಕೂ |
| ೨೬ | ೫ | ಹುರಿದುಂಬಿಸಿಗೊಂಡು |

| ಪುಟ | ಸಾಲು | ಶುದ್ಧ | ಪುಟ | ಸಾಲು | ಶುದ್ಧ |
|---|---|---|---|---|---|
| ೨೬ | ೧೧ | ಕಲಿಮಾರ್ತಂಡ | , | ೧೯ | ಕಡುಗಲಿ |
| ,, | ೧೩ | ಕಟ್ವಾಣತಿ | ,, | ೨೨ | ಇದಿರಾಂತು |
| ,, | ೨೭ | ಅನಂತರ | ೩೮ | ೧ | ಬಸಿರೊಳಗೆ |
| ೨೭ | ೧೩ | ಖಡ್ಗಾಘಾತ | ,, | ೭ | ಅವಿತುಕೊಂಡು |
| ,, | ,, | ಬಣವೆ | ,, | ೧೪ | ಹೊಡೆತ |
| ,, | ೧೯ | ಮೊರಹೊಕ್ಕು | ೩೯ | ೧೭ | ಕಪ್ಪಕಾಣಿಕೆ |
| ,, | ೨೩ | ಮಳಖೇಡಕ್ಕೆ | ,, | ೧೮ | ದೇಶವನ್ನು |
| ೨೮ | ೧ | ಇಷ್ಟುಹೊತ್ತಿಗೆ | ೪೧ | ೧೨ | ವಾಙ್ಮಯ ಸ್ಥಿತಿ |
| ೨೯ | ೮ | ಪುರುಷ | ,, | ೧೩ | ದೊರೆಗಳು |
| ,, | ೨೦ | ಆದರೆ | , | ೧೬ | ಅವರ |
| ೩೦ | ೧ | ತ್ರೀಃ ಪ್ರತಿವಸತಿ | ೪೨ | ೭ | ಇಕ್ಕಟ್ಟಿನ |
| ೩೧ | ೫ | ಕೈಗೊಟ್ಟರೆ | ೪೩ | ೩ | ಪುನಃ |
| ,, | ೧೨ | ಬಿಟ್ಟುಕೊಂಡಿರುವಾಗ | ೪೪ | ೧೮ | ತರಿದೊಟ್ಟಿ |
| ,, | ೧೩ | ಆಕಸ್ಮಿಕವಾಗಿ | ೪೫ | ೧೦ | ತೈಲಪನು |
| ,, | ,, | ಸುದ್ಧಿ | ,, | ೨೪ | ಛಬ್ಬಿ |
| ,, | ೧೮ | ಧ್ರುವ ಗೋವಿಂದ | ,, | ,, | ತೈಲಪನು |
| ೩೨ | ೪ | ನೃಗೂಟ್ಟನು | ೪೭ | ೧ | ಭದ್ರಕ |
| ,, | ೧೨ | ಗೋವಿಂದನ ವತಕ್ಕೆಪೂರಾ | ,, | ೩ | ಕ್ರಾಕಲಿಕ |
| ,, | ೧೪ | ಫಲದ್ರೂಪ | ,, | ೫ | ಕುಂಭ |
| ೩೩ | ೪ | ಆದರ ಬುದ್ಧಿ | ,, | ೮ | ಘೂರ್ಜರ |
| ೩೪ | ೧೧ | ತೋರಿಸುವ | ೪೮ | ೭ | ತುಂಬಿದ್ದರೂ |
| ೩೫ | ೩ | ಬಾದಾಮಿಯ ಚಾಳುಕ್ಯ | ,, | ೧೧ | ಕಟ್ಟಿಸುತ್ತಾರೆ |
| ೩೭ | ೨ | ಒಂದೇ ಮೈಯಲ್ಲಿ | ೪೯ | ೧೩ | ಚದರಿದವು |
| ,, | ೧೨ | ಚೋಳರ ರಾಷ್ಟ್ರ | ,, | ೨೧ | ಧೈರ್ಯೋದ್ದಾಮ |
| | | [ಕೂಟದ | ,, | ೨೪ | ಅಸುವನ್ನು |
| ,, | ೧೬ | ಅರ್ಕೋಣದ | ೫೦ | ೯ | ಸ್ತಂಭ |

| ಪುಟ | ಸಾಲು | ಶುದ್ಧ | ಪುಟ | ಸಾಲು | ಶುದ್ಧ |
|---|---|---|---|---|---|
| ೫೦ | ೯ | ರಾಷ್ಟ್ರಕೂಟ | ೬೮ | ೨೩ | ಸಂಭವಿಸಬಹುದೆಂದು |
| ,, | ೧೯ | ಚೋಳರ | ೬೮ | ,, | ಎರಗಿದ ಎಡಬಲದ |
| ೫೧ | ೧೨ | ಮೌಕ್ತಿಕ | ೭೧ | ೧೪ | ವಿಶೇಷವೇನೆಂದರೆ |
| ೫೨ | ೧೧ | ಮೊಳಗಿದರು | ,, | ೨೩ | ಅಗಳತೆಗಳಾಗಿದ್ದವು |
| ,, | ೧೩ | ಅಕ್ಕಾದೇವಿಯೂ | ೭೨ | ೧೪ | ಅಚ್ಚುಗಿ |
| ೫೪ | ೧೧ | ಮೊರೆಹೊಕ್ಕು | ೭೩ | ೪ | ಸ್ಥಿತಿ |
| ೫೫ | ೭ | ಅಂತಹರಲ್ಲಿ | ೭೪ | ೫ | ಮಾಂಡಲಿಕ |
| ,, | ೧೭ | ಶಾಂತಿಯಿಂದ | ,, | ೭ | ತನ್ನಗೋಸ್ಕರ |
| ೫೬ | ೨೫ | ತೀಕ್ಷ್ಣ | ,, | ೧೬ | ಆಳತೊಡಗಿದನು |
| ೫೭ | ೧೨ | ನದಿಗಳ ನಡುವಿನ ಜನ್ನಯುಂಧ] | ,, | ೧೮ | ವಿಶೇಷ ಸಂಗತಿ |
| ,, | ೧೭ | ಪೆರ್ಮಾಡಿ | ,, | ೨೦ | ಚಕ್ರವರ್ತಿಗಳೆಂದೆನ್ನಿಸಿಕೊಳ್ಳು] |
| ,, | ೩೧ | ಕೇರಳ ಧರಣೀಶ | ,, | ೩೩ | ಗ್ರಸ್ತವಾಗಿ |
| ,, | ೨೨ | ಕೊಲ್ಲಿಪಾಕಿಗ | ೭೫ | ೧೩ | ಪ್ರಾಬಲ್ಯಕ್ಕೆ |
| , | ೨೬ | ಸುಟ್ಟುದರ | ೭೬ | ೧೪ | ವಿಷ್ಣುವರ್ಧನನು |
| ೫೮ | ೧೦ | ಝುಟಿತಿ | ,, | ೧೯ | ವಿಧ್ವಂಸನ |
| ೫೯ | ೨ | ವರೆಗೆ | ೭೭ | ೪ | ಗೆದಯುತ್ತಿರುವಾಗ |
| ೬೦ | ೧೧ | ಮೊರೆಹೋಗದ | ,, | ೨೪ | ಜಿಗಿಯಿತು |
| ೬೨ | ೨೦ | ಹೆಗಲುಗೊಟ್ಟು | ೭೮ | ೨ | ಪುರಿಗೆರೆ |
| ,, | ೩೬ | ಭೂಭೃದ್ವರ್ಗ | ,, | ೬ | ಸೂಸಯೂರು ಅಥವಾ ಶಶಕಪುರದಲ್ಲಿ ದಹನ ಮಾಡಲ್ಪಟ್ಟಿತು |
| ,, | ,, | ಧರಣೀಶ | | | |
| ,, | ೨೭ | ಶ್ರೀಗೆ ಅದನ್ನು | | | |
| ೬೫ | ೨೪ | ಒಬ್ಬರನ್ನೊಬ್ಬರು | ,, | ೯ | ಕರ್ನಾಟಕದ |
| ,, | ೨೫ | ತೆಕ್ಕೆ | ೭೯ | ೫ | ಎಲ್ಲರಲ್ಲಿಯೂ ಶ್ರೇಷ್ಠನಾದ] |
| ೬೮ | ೨೦ | ಎಲ್ಲಿಯೂ | | | |

| ಪುಟ | ಸಾಲು | ಶುದ್ಧಿ |
|---|---|---|
| ೭೯ | ೮ | ರಾಜ್ಯಕ್ರಾಂತಿ |
| ,, | ೧೩ | ಅಣ್ಣಿಗೇರಿ |
| ೮೦ | ೨೩ | ದೊಡ್ಡ |
| ೮೧ | ೧೦ | ಪರಾಕ್ರಮಿಯು |
| ,, | ೧೧ | 'ಆತನೊಡನ' ಓದಬೇಡಿರಿ] |
| ,, | ೧೩ | ಪೆರ್ಮಾಡಿ |
| ,, | ೨೩ | "ಆದರೆ" ಓದಬೇಡಿರಿ |
| ೮೨ | ೮ | ಹಿಡಿದುಕೊಂಡುದರಿಂದ |
| ,, | ೨೦ | ಎದುರಿಸಿದನು |
| ೮೩ | ೫ | ಇಸ್ವಿಯ |
| ,, | ೮ | ಧಾರಣ |
| ,, | ೨೦ | ನಿಜಭುಜಪ್ರತಾಪದಿಂದ |
| ,, | ೨೩ | ಅದನ್ನು ಮಸೆದನು |
| ೮೪ | ೯ | ಉಪಯೋಗಿಸಿ |
| ,, | ೧೫ | ಅವರು |
| ,, | ೧೯ | ಬುದ್ಧ |
| ೮೫ | ೧೯ | ಮಾರ್ಕ್ವಿಸ ಇಟೋ ಎಂಬ ಮಂತ್ರಿಯು ಇದಕ್ಕೆ ಬದಲಾಗಿ ನೋಗಿ ಎಂಬ .... ದಂಡನಾಯಕನು ಎಂದು ಓದಬೇಕು |
| ೮೬ | ,, | |
| ೮೭ | ೩ | "ಗರುಡರು" ಎಂಬುದೊಂದು] |

| ಪುಟ | ಸಾಲು | ಶುದ್ಧಿ |
|---|---|---|
| ೮೭ | ೭ | 'ಇದರಲ್ಲಿ' ಲೋಪ ಮಾಡಬೇಕು] |
| ,, | ೧೧ | ಕಾದಿ |
| ,, | ೧೨ | ಬಲ್ಲಾಳು |
| ೮೮ | ೭ | ವೀರಬಲ್ಲಾಳ |
| ೮೯ | ೯ | ವೀರಬಲ್ಲಾಳನ ವಿಶ್ವಾಸಕ್ಕೆ ಪಾತ್ರನಾದ |
| ,, | ೧೭ | ಇಂತಹ ಈ, ಗರುಡರು |
| ೯೧ | ೬ | ದಕ್ಷಿಣದಲ್ಲಿ ಪ್ರವೇಶಿಸಿ |
| ೯೧ | ೧೯ | ಆ ಕುದುರಯನ್ನೇರುವುದು] |
| ೯೨ | ೧೨ | ಸಾವಿರ |
| ,, | ೧೬ | ಆನೆಗಳು |
| ೯೩ | ೧೧ | ಉರವಣೆಯಿಂದ ಕಾದಿ |
| ೯೪ | ೬ | ದೇಶಕ್ಕೆ ಬಂದು |
| ,, | ೯ | ಕರ್ತವ್ಯ |
| ೯೫ | ೫ | ಅಂಗುಷ್ಠ |
| ,, | ೨೪ | ಅವಳು ಗಂಡನಮುಂದೆ |
| ೯೬ | ೧ | ಆತನನ್ನು ಪಾರು ಮಾಡಿಕೊಂಡು] |
| ,, | ೪ | ಮಂತ್ರಿಯು |
| ,, | ೧೫ | ಒಬ್ಬ ಬಂಟನು |
| ೯೮ | ೨೫ | ಬಾಹ-ಉದ್ದೀನನ |
| ೧೦೦ | ೫ | ತಿರುಹಿದ |
| ೧೦೨ | ೨ | ಹಾವಳಿಯ ಮೂಲಕ |
| ,, | ೯ | [ಓಡಿಸಿ)ದವು |

| ಪುಟ | ಸಾಲು | ಶುದ್ಧಿ | ಪುಟ | ಸಾಲು | ಶುದ್ಧಿ |
|---|---|---|---|---|---|
| ೧೦೨ | ೧೮ | ಆದರೆ | ೧೧೧ | ೧೮ | ಹುದುಗಿಕೊಂಡು |
| ೧೦೩ | ೧೯ | ಅಟ್ಟಿಕೊಟ್ಟನು | ೧೧೨ | ೫ | ಒರಂಗಲ್ಲದ |
| ೧೦೪ | ೪ | ಭುಜಾವಷ್ಟಂಭ | ,, | ೮ | ,, |
| ,, | ೧೩ | ವರ್ಣಿಸಲಸದಳವು | ,, | ೧೧ | ,, |
| ,, | ೧೪ | ರಣಕ್ರಂದನದ | ,, | ೧೬ | ,, |
| ,, | ೨೩ | ಓಡಿಹೋಗಲಾರಂಭಿಸಿತು] | ೧೧೩ | ೧೬ | ಗಿಡುಗನಂತೆ |
| | | | ,, | ೧೭ | ಕೈಯ್ಯಲ್ಲಿ |
| ,, | ,, | ಆಕಸ್ಮಿಕವಾಗಿ | ,, | ೨೦ | ತಲೆಗೊಟ್ಟು |
| ೧೦೫ | ೩ | ತಿಂಗಳವರೆಗೆ | ,, | ೨೧-೨೨ | ಇಬ್ಬರು ಚಕ್ರವರ್ತಿಗಳು ಗಂಡಾಂತರದೊಳಗೆ ಸಿಕ್ಕುವುದುಅವರಿಬ್ಬರೂ |
| ೧೦೬ | ೯ | ಬಿಟ್ಟುಕೊಡೆನೆಂದು | | | |
| ,, | ೨೪ | ಆಟೋಪಕ್ಕೆ | | | |
| ,, | ೨೬ | ಒಂಬತ್ತು | ,, | ೨೫ | ಒರಂಗಲ್ಲ |
| ೧೦೭ | ೧೩-೧೪ | " ಈ ನೃಪೇಂದ್ರನ ಅರಮನೆಯಲ್ಲಿ " ಎಂಬುದು ೧೬ನೆಯ ಸಾಲಿನಲ್ಲಿ " ಅನವರತವಾಗಿ ಹರಿಯುತ್ತಿತ್ತು " ಎಂಬುದರ ಹಿಂದ ಇರತಕ್ಕದ್ದು | ೧೧೪ | ೧ | ,, |
| | | | ,, | ೧೦ | ತನ್ನ ಸೈನಿಕರಿಗೆ |
| | | | ,, | ೨೪ | ಕೊಲೆಗಡಕ |
| | | | ೧೧೭ | ೧೯ | ಗರಡಿಯ ಸಾಧನ |
| | | | ೧೧೮ | ೫ | ಹಣ್ಣು ಮಾಡಿದುದು |
| | | | ೧೧೯ | ೮ | ಕೃಷ್ಣರಾಜನಿಗೆ ಹಸ್ತಗತವಾಯಿತು] |
| ,, | ೧೬ | ಬಿದರ ಮೆಳೆ | ೧೨೧ | ೫ | ಬಡೆಯ |
| ,, | ೧೯ | ಧಾರಿಣಿ | ,, | ೨೫ | ಸೈನ್ಯವನ್ನು |
| ೧೦೯ | ೧೦ | ನಲೆಗೊಂಡಿತ್ತು | ,, | ೨೬ | ತೂಳ್ದಿ |
| ೧೧೦ | ೧೩ | ನೆಲೆಗೊಂಡಿತ್ತು | ೧೨೨ | ೧೦ | ಕಾದಿ |
| ೧೧೧ | ೩ | ಒರಂಗಲ್ಲ | ,, | ೧೬ | ಸುಲ್ತಾನನನ್ನು |
| ,, | ೯ | ಮುರಿಬಡೆದು | ೧೨೩ | ೨ | ಇಷ್ಟೇ ಅಲ್ಲ |
| ,, | ೧೫ | ತುತ್ತಾಗತಕ್ಕವನೇ | ೧೨೫ | ೫ | ಉಬ್ಬಿದವರಾಗಿ |

| ಪುಟ | ಸಾಲು | ಶುದ್ಧ |
|---|---|---|
| ೧೨೫ | ೧೮ | ತ್ವೇಷವು |
| ೧೨೬ | ೧೬ | ಕಡೆದುಕೊಂಡು |
| ,, | ೧೯ | ಒಡೆದಿತ್ತು |
| ೧೨೮ | ೬-೭ | ತೆಗೆದುಕೊಂಡುದರಿಂದ |
| ,, | ೮ | ಕೊಲ್ಲಲ್ಪಟ್ಟುದರಿಂದ |
| ೧೩೦ | ೧೮ | ಎದುರಿಸುವ |
| ,, | ೨೧ | ಕಂಬಗಳ |
| ,, | ,, | ಒಗೆಯುವದಕ್ಕೆ |
| ೧೩೧ | ೨ | ಅಟ್ಟಿ |
| ,, | ೩ | ಅರಸನಿಗೆ |
| ೧೩೨ | ೬ | ಕಂಡು |
| ೧೩೨ | ೧೦ | ಬಿಕ್ಕಟ್ಟಿನ |
| ೧೩೩ | ೧೦ | ವಿರೂಪಾಕ್ಷೇಶ್ವರನನ್ನು |
| ,, | ೧೨ | ಪೂಜಾರಿಗಳಾದ |
| ,, | ೧೬ | ಬಿಳಿಚೋಡಿನ |
| ,, | ೧೭ | ಪೂಜಾರಿಗಳು |
| ೧೩೪ | ೩ | ಬಿಳಿಚೋಡಿನ |
| ೧೩೬ | ೧೨ | ಮಲಗಿ ನಿದ್ದೆ |
| ,, | ೧೨ | ನಿಟ್ಟಿರುಳಲ್ಲಿ |
| ,, | ೧೩ | ಅರಸುಗುದುರೆ |
| ೧೩೬ | ೧೯ | ಬಡೆದು ಗೂಟಕ್ಕೆ |
| ,, | ೨೨ | ಹಾಗೆಯೇ |
| ೧೩೭ | ೨ | ಮೆಟ್ಟಿ ಹಿಡಿದು |
| ,, | ೩ | ಎಡಗೈಯಿಂದ |
| ,, | ೬ | ಒಕ್ಕೈಯ್ಯವ |
| ,, | ೯ | ಬರ್ಚೆ |

| ಪುಟ | ಸಾಲು | ಶುದ್ಧ |
|---|---|---|
| ೧೩೭ | ೧೦ | ಸಾವರಿಸಿಕೊಂಡು |
| ,, | ೨೦ | ಅರಸುಗುದರೆ |
| ೧೩೮ | ೨೩ | ಕಲುಬುರ್ಗೆಯನ್ನು ಗೆದ್ದುಕೊಟ್ಟನು] |
| ,, | ೨೪ | ಕೈಯ್ಯಳವು |
| ೧೩೯ | ೧೬ | ಕುಹಕಿಗಳಿಂದ |
| ,, | ೧೯ | ಸರೆಯಲ್ಲಿಟ್ಟರು |
| ೧೪೧ | ೧-೨ | ತಡೆಯುವೇಕೆಂದು |
| ,, | ೨೨ | ಟೀಪ್ರುವನ್ನು |
| ,, | ೨೫ | ದಾಳಿ ಮಾಡಿದನು |
| ೧೪೨ | ೩ | ಕಂದಕವೆಲ್ಲ |
| ,, | ೮ | ಯೋಜಿಸುವ |
| ,, | ೧೧ | ಕೈಯ್ಯೋನಿಕೆಯಿಂದ |
| ,, | ೨೬ | ಊಟಕ್ಕೆ |
| ,, | ೨೭ | ಹೋಗಿದ್ದನು |
| ೧೪೩ | ೨ | ಯಾರೋ ಮೇಲಕ್ಕೇರಿ |
| ,, | ೯ | ಬಾಯಿಗೆ |
| ,, | ೧೨ | ಒನಿಕೆ |
| ೧೪೪ | ೩ | Epigraphia |
| | ೪ | ,, ,, |

**ಶಬ್ದಕೋಶ.**

| ಪುಟ | ಸಾಲು | ಶುದ್ಧ |
|---|---|---|
| ೧ | ೧೧ | ಅವಷ್ಟಂಭ |
| ೨ | ೧೦ | ಅಡ್ನಾಡಿ |
| ,, | ೧೨ | ಒಕ್ಕೈಯ್ಯವ |
| ೩ | ೧೮ | ಕೊಳುಗಳ |

| ಪುಟ | ಸಾಲು | ಶುದ್ಧ | ಪುಟ | ಸಾಲು | ಶುದ್ಧ |
|---|---|---|---|---|---|
| ೩ | ೧೯ | ಕಪ್ಪ | ೬ | ೧೭ | ವೀರ |
| ,, | ೨೩ | ತೋರಿಸುವವರಿಗೆ ವ್ಯೃತ್ಯು] | ,, | ೨೪ | ಭುಜಬಲಾವಷ್ಟಂಭ |
| | | | ೭ | ೩ | ಮತ್ತನಾದ ಆಳು |
| ೪ | ೪ | ಬೀಸುವ ಕಲ್ಲು | ,, | ೭ | ಹದನವಾದ |
| ,, | ೧೩ | (ತಕ್ಕು=ದೊಡ್ಡ) | ,, | ೧೧ | (ಸೈನ್ಯದ) |
| ,, | ೨೦ | ತುಡುಕು=ತಡವು | ,, | ೧೭ | (ಅಂಕ+ಮಣಿ) ಕುದುರೆಯ ಥಡಿಗೆ ಹಚ್ಚಿದ (ಹಿತ್ತಾಳಿಯ ಮತ್ತು ಬೆಳ್ಳಿಯ) ವಿವಿಧ ಹೂವುಗಳು ಅಥವಾ ಬಿಲ್ಲೆಗಳು |
| ,, | ೨೩ | (ತುಳಿಲ್=ಶೌರ್ಯ) | | | |
| ,, | ,, | ಶೂರ, ಬಂಟ | | | |
| ,, | ೨೪ | ತೂಳ್ದಿ (ತೂಳ್ದು= ಬೆನ್ನಟ್ಟು) | | | |
| ೫ | ೧೭ | ನಿಶಿತಖಡ್ಗ | | | |
| ೬ | ೧೧ | ಹಿರಿದಾದ | | | |

## (ಆ) ರೂಢಿಯಲ್ಲಿದ್ದು ವ್ಯಾಕರಣವಿರುದ್ಧವಾದ ಮತ್ತು ಅನ್ಯ ಕಾರಣಗಳ ಮೂಲಕ ಚರ್ಚೆಗೆ ಅರ್ಹವಾದ ಶಬ್ದಗಳು.

| ಪುಟ | ಸಾಲು | ಶುದ್ಧ | ಪುಟ | ಸಾಲು | ಶುದ್ಧ |
|---|---|---|---|---|---|
| ೨ | ೨೪ | ದುಶ್ಕಟ | ೩೧ | ೧೪ | ಕೆಂಡವಾದನು |
| ೩ | ೧೮ | ಕ್ಷತ್ರಿಯರ ಮಾತ್ರವೇ | ೩೨ | ೧೨ | ಪೂರಾ |
| ೮ | ೨೫-೨೬ | ಚಿಕ್ಕ ಬಾಲಕನು | ,, | ೨೫ | ಕಲಾಪ್ರೇಮಿಯು, ಕವಿಯು |
| ೯ | ೧೨ | ಚಿಗಪ್ಪ | | | |
| ೧೮ | ೯ | ಖಡ್ಗಾವಲೋಕವೆಂಬ | ೩೫ | ೧ | ವೃಕ್ಷವು ಮುದುಕವಾಗಿ |
| ೧೯ | ೫ | ಬೆನ್ನುಕಟ್ಟಿ | ೩೬ | ೧೩ | ಭೂತರಾಯವೆಂಬ ಕಲ್ಪವೃಕ್ಷ |
| ೨೧ | ೫ | ಕೇವಲ ತನ್ನ ಗೌರವವ ನ್ನಷ್ಟೇ] | ೩೭ | ೨೧ | ಸಗರತ್ರಿನೇತ್ರ |
| ,, | ,, | ರಾಜ್ಯಲೋಭಗ್ರಸ್ತ ನಲ್ಲವೆಂದು | ೩೯ | ೫ | ಕಲಚೂರ್ಯರಿಗೆ ನೆರವಾದುದು |
| ೩೦ | ೧೦ | ಬರಿಸಿಡಲು | ,, | ೨೨ | ಅಧಟ |

| ಪುಟ | ಸಾಲು | ಶುದ್ಧ | ಪುಟ | ಸಾಲು | ಶುದ್ಧ |
|---|---|---|---|---|---|
| ೪೨ | ೩ | ಸಣ್ಣಾಗಿ ಸುಡುತ್ತಿತ್ತು | ೧೧೦ | ೧೪ | ಗೊಂದಲವು ಪ್ರಾರಂಭವಾಯಿತು |
| ೪೪ | ೨೪ | ಯುದ್ಧಯಾತ್ರೆಗ | ೧೧೧ | ೨೨ | ವೀರರನ್ನು ಉಚ್ಚಾಟನಗೈದರು |
| ೫೭ | ೧೬ | ಚೋಳ ಅರಸನು | ೧೧೩ | ೧ | ಆಶೆಪಟ್ಟು |
| ೫೮ | ೧೪ | ಪರಾಕ್ರಮವನ್ನು ತೋರಿಸಿದನು | ,, | ೧೫ | ಸ್ವಪ್ಪೆ ಜನರನ್ನು |
| ,, | ೧೭ | ಸಮ್ಮುಖವನ್ನು ಸಾರ್ದನು,, | ೧೧೪ | ೩ | ಇತಿಹಾಸವಿಂದ |
| ೬೨ | ೨೦ | ತಾನೊಬ್ಬನೇ ಹೆಗಲುಕೊಟ್ಟು | ,, | ೧೩ | ಚಳಿಸಗೂಡದ |
| ೮೧ | ೧೧೩ | ಅನ್ಯಮಲೆಪರ | ,, | ೧೫-೧೬ | ಕೆಟ್ಟ ಬುದ್ಧಿ |
| ೮೪ | ೫ | ವಿಶೇಷ ಜನರು | ೧-೫ | ೨೭ | ಸಿಲ್ಕಿರುವ |
| ೮೮ | ೪ | ಬಲ್ಲಾಳನೇ ತನ್ನ ಗುರು ಎಂದು ಬಗೆದಿದ್ದನು | ೧೧೬ | ೮ | ಸುರಿಗ ಕಾಳಗ |
| ,, | ೧೯ | ತರವಾರಿಯ ಬಾರಿಗ | ,, | ೧೧ | ಕೋಟೆಯ ಒಳಗೆ ನುಗ್ಗಿದರು |
| ೯೦ | ೬ | ಪರಮಾಯುಷ್ಯವೆಲ್ಲವೂ ತನ್ನ ಆಳ್ವನಿಗಾಯ್ತು ನಿಸಿದನು | ೧೧೮ | ,, | ಹೆಸರು ಕೇಳಿದೊಡನೆ |
| ೯೬ | ೯ | ನನಪು ಆಯಿತು | ೧೧೯ | ೧೫ | ಶ್ರಮಪಟ್ಟಿತು |
| ೯೭ | ೨೬ | ಉತ್ತರ ಕೊಟ್ಟನು | ೧೨೨ | ೧೧ | ಇಡೀ ಸೈನ್ಯ |
| ೧೦೧ | ೧೮ | ಸ್ಥಾಪಿಸಿದ್ದು | ,, | ೨೪ | ಎದೆ ಕಳೆದುಕೊಂಡು |
| ೧೦೨ | ೨೧ | ಸ್ಥಾಪಿಸಿದುದರಿಂದ | ೧೨೫ | ೧೭ | ಸಾಮಾನ್ಯ ಜನತೆಯಲ್ಲಿ |
| ೧೦೪ | ೧೪ | ಒಬ್ಬನು ಮಾತ್ರವೇ ಪಾರಾಗಿ | ೧೨೬ | ೧೯ | ಮೊಳಕೆ |
| ,, | ೧೭ | ಸ್ವತಃ ತಾನೇ ಬಂದು | ೧೨೮ | ೫ | ಭಲ್ಲೆ ಶಸ್ತ್ರಪ್ರಯೋಗ ಇವುಗಳಲ್ಲಿ |
| ,, | ೨೬ | ಆನಕಾಳಗ | ೧೨೯ | ೨ | ಕೋಟೆಯನ್ನು ಲಗ್ಗೆಯಿಟ್ಟರು |
| ೧೦೫ | ೧೦ | ತೊಂದರೆ ಕೊಟ್ಟರು | ೧೩೦ | ೧ | ಪಂಥಪಾಡು |
| ,, | ೧೦ | ಹಿಂದೂಗಳು | ೧೩೬ | ೭ | ಬೀಡಿನೊಳಗೆ |
| | | | ೧೩೯ | ೧೦ | ಕ್ಷುದ್ರಗಳನ್ನು |